ಕರ್ನಾಟಕ ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ



# Karnataka Scout & Guide

*Monthly News Magazine*

Vol - 13 Combined Issue (Jan-Feb-March 2015) Issue No. 01 ₹ 10/-




SRI VAJUBHAI RUDABHAI VALA, Hon'ble Governor of Karnataka released the First Day Postal Cover at the Inaugural function of the 27th Karnataka State Scout and Guide Jamborette held on 18th January 2015 at Dr Annie Besant Scouts and Guides State Training and Camping Centre, Doddaballapur Bengaluru Rural Dist. Sri D.K. Shivakumar Hon'ble Minister for Energy Sri M.S. Ramanujan, Chief Post Master General, Karnataka, Sri P.G.R. Sindhia ate Chief Commissioner, Sri B.I. Nagarale, IAS(Retd.) Chief National Commissioner, New Delhi i. T. Venkataramanaiah, Hon'ble M.L.A. and Sri Mohammad Moisin, IAS, Commissioner for Public struction are seen.




I SIDDARAMAIH, Hon'ble Chief Minister of Karnataka & President, The Bharat Scouts and Guides rnataka is with the Souvenir "NISARGA" released by Dr. H.C. Mahadevappa, Hon'ble Minister for blic Works on 22nd January 2015 at the Valedietory Programme of the Jamborette. M. Veerappa Moily, Hon'ble Member of Parliament, Chikkaballapur & Former Chief Minister of rnataka, Sri R. Roshan Baig, Hon'ble Minister for Information, Infrastructure Development and Haj Krishna Byregowda, Hon'ble Minister for Agriculture, Sri P.G.R. Sindhia, State Chief Commissioner T. Venkataramanaiah, Hon'ble MLA and Smt. Salma K. Faheem, IAS, Deputy Commissioner ngalore Rural District, Smt. C.P. Shailaja, CEO, Bengaluru Rural ZP, Sri R.G. Venkatachalaiah, Former A & Chairman of BIAPA are seen.







ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ವಜುಬಾಯಿ ರೂಡಾಬಾಯಿ ವಾಲಾ ಅವರು ಜಾಂಬೋರೇಟ್ ಸಮಾವೇಶದಲ್ಲಿ ಮಾಜಿ ಸಚಿವ ದಿವಂಗತ ಕೊಂಡಜ್ಜಿ ಬಸಪ್ಪ ಅವರ ಭಾವಚಿತ್ರಕ್ಕೆ ಪುಷ್ಪಗಳನ್ನು ಅರ್ಪಿಸುತ್ತಿರುವುದು. ಮಾನ್ಯ ಶಾಸಕ ಶ್ರೀ ಟಿ. ವೆಂಕಟರಮಣಯ್ಯ ಹಾಗೂ ಸಾ.ಶಿ. ಇಲಾಖೆ ಆಯುಕ್ತ ಶ್ರೀ ಮಹಮದ್ ಮೊಹಿಸಿನ್ ಅವರುಗಳಿದ್ದಾರೆ.

ಜಾಂಬೋರೇಟ್ ಸಮಾವೇಶದ ಉದ್ಘಾಟನಾ ಕಾರ್ಯಕ್ರಮದಲ್ಲಿ ಘನತೆವೆತ್ತ ರಾಜ್ಯಪಾಲರೊಂದಿಗೆ ಸ್ಥಳೀಯ ಶಾಸಕರು ಆರೋಗ್ಯ ಸಚಿವ ಶ್ರೀ ಯು.ಟಿ ಖಾದರ್ ಅವರು ಸ್ಕೌಟ್ಸ್ ಹಾಗೂ ಗೈಡ್ಸ್ ಸಮವಸ್ತ್ರ ಧರಿಸಿ ಉಪಸ್ಥಿತರಿದ್ದಾರೆ ಹಾಗೂ ಇಂಧನ ಸಚಿವ ಶ್ರೀ. ಡಿ.ಕೆ. ಶಿವಕುಮಾರ್ ಅವರನ್ನು ಕಾಣಬಹುದು.






ಜಾಂಬೋರೇಟ್ ಸಮಾವೇಶದ ಸಾಹಸಮಯ ಮತ್ತು ಚಟುವಟಿಕೆಗಳ ಕಾರ್ಯಕ್ರಮ ಉದ್ಘಾಟಿಸಿದ ಗೃಹ ಸಚಿವ ಶ್ರೀ. ಕೆ.ಜೆ. ಜಾರ್ಜ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ. ಪಿ.ಜಿ.ಆರ್. ಸಿಂಧ್ಯ, ಮಾನ್ಯ ಶಾಸಕರು ಹಾಗೂ ಪೊಲೀಸ್ ವರಿಷ್ಠಾಧಿಕಾರಿಗಳು ಚಿತ್ರದಲ್ಲಿದ್ದಾರೆ.

ಜಾಂಬೋರೇಟ್ ಸಮಾವೇಶದ ಶಿಬಿರಾಗ್ನಿ ಉದ್ಘಾಟನಾ ಕಾರ್ಯಕ್ರಮದಲ್ಲಿ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವ ಶ್ರೀ ಕಿಮ್ಮನೆ ರತ್ನಾಕರ್, ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರಾದ ಶ್ರೀ ಬಿ.ಜಿ. ನಂದಕುಮಾರ್, ಭಾ.ಆ.ಸೇ ಹಾಗೂ ಇತರರನ್ನು ಕಾಣಬಹುದು.





ಜಾಂಬೋರೇಟ್ ಕಾರ್ಯಕ್ರಮದ ಚಟುವಟಿಕೆಗಳನ್ನು ವೀಕ್ಷಿಸಲು ಆಗಮಿಸಿದ್ದ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವ ಶ್ರೀ ಆರ್.ವಿ. ದೇಶಪಾಂಡೆ ಹಾಗೂ ಸ್ಥಳೀಯ ಶಾಸಕ ಶ್ರೀ ಟಿ. ವೆಂಕಟರಮಣಯ್ಯ ಮತ್ತು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯರವನ್ನು ಕಾಣಬಹುದು.

ಜಾಂಬೋರೇಟ್‌ನ ಸ್ಕೌಟ್ಸ್ ಹಾಗೂ ಗೈಡ್ಸ್ ವಿದ್ಯಾರ್ಥಿಗಳ ಚಟುವಟಿಕೆ ವಿಕ್ಷೀಸಲು ಆಗಮಿಸಿದ್ದ ಮಾನ್ಯ ವಿಧಾನ ಸಭಾಧ್ಯಕ್ಷರಾದ ಶ್ರೀ ಕಾಗೋಡು ತಿಮ್ಮಪ್ಪರವರು ಹಾಗೂ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಮತ್ತು ರಾಜ್ಯ ಜಂಟಿಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿಅವರನ್ನು ಕಾಣಬಹುದು.




ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿರುವ ಭಾರತ್ ಸ್ಕೌಟ್ಸ್ ಹಾಗೂ ಗೈಡ್ಸ್, ಕರ್ನಾಟಕ, ಡಾ॥ ಆನಿಬೆಸೆಂಟ್ ತರಬೇತಿ ಶಿಬಿರ ಕೇಂದ್ರದ ಮಹಾದ್ವಾರ.




ಡಾ॥ ಆನಿಬೆಸೆಂಟ್ ತರಬೇತಿ ಶಿಬಿರ ಕೇಂದ್ರದಲ್ಲಿ ಸ್ಥಾಪಿಸಿರುವ ಚಳವಳಿಯ ಸಂಸ್ಥಾಪಕರುಗಳಾದ ಲಾರ್ಡ್ ಬೇಡನ್ ಪೊವೆಲ್, ರಾಜ್ಯ ಸಂಸ್ಥೆಯ ಸ್ಥಾಪಕ ಪೋಷಕರಾಗಿದ್ದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಹಾಗೂ ಆಲೆವ್ ಲೇಡಿ ಬೇಡನ್ ಪೊವೆಲ್ ಅವರುಗಳ ಶಿಲಾಫಲಕ.



27ನೇ ಜಾಂಬೋರೇಟ್ ಸಮಾವೇಶದ ಉದ್ಘಾಟನಾ ಕಾರ್ಯಕ್ರಮ ನೆರವೇರಿಸಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡುತ್ತಿರುವ ಘನತೆವೆತ್ತ ರಾಜ್ಯಪಾಲ ಶ್ರೀ ವಾಜುಬಾಯಿ ರೂಡಾಬಾಯಿ ವಾಲಾರವರು.



27ನೇ ಜಾಂಬೋರೇಟ್‌ನ ಸಮಾರೋಪ ಸಮಾರಂಭದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಳನ್ನುದ್ದೇಶಿಸಿ ಮಾತನಾಡುತ್ತಿರುವ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯರವರು.





ಜಾಂಬೋರೇಟ್‌ನ ಸಮಾವೇಶದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಳು ವಾಸ್ತವ್ಯ ಹೂಡಿದ್ದ ಗುಡಾರ(ಟೆಂಟ್) ಗಳನ್ನು ವೀಕ್ಷಿಸುತ್ತಿರುವ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯರವರು ಅವರೊಂದಿಗೆ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಮತ್ತು ಸಂಸದ ಶ್ರೀ ಎಂ. ವೀರಪ್ಪ ಮೊಯಿಲಿ ಹಾಗೂ ಸ್ಥಳೀಯ ಶಾಸಕರಿದ್ದಾರೆ.




ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಳು ಬ್ಯಾಂಡ್ ಪ್ರದರ್ಶನ ನೀಡುತ್ತಿರುವುದು.



ಜಾಂಬೋರೇಟ್ ಸಮಾವೇಶದಲ್ಲಿ ಗೈಡ್ಸ್‌ಗಳು ಬಕೆಟ್ ವರ್ಗಾವಣೆಯ ಆಟದಲ್ಲಿ ತೊಡಗಿರುವುದು.



ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ ವಿದ್ಯಾರ್ಥಿ ಗೋಡೆ ಹತ್ತುವ ಸಾಹಸ ಕ್ರೀಡೆಯಲ್ಲಿ ಪಾಲ್ಗೊಂಡಿರುವುದು.




ಜಾಂಬೋರೇಟ್‌ನ ಸಮಾವೇಶದಲ್ಲಿ ಗೈಡ್ಸ್ ವಿದ್ಯಾರ್ಥಿನಿಯರು ತಾವು ಪ್ರತಿನಿದಿಸುವ ಜಿಲ್ಲೆಗಳ ತಿಂಡಿ ತಿನಿಸುಗಳ ಜಿಲ್ಲಾ ದರ್ಶನದಲ್ಲಿ ಪಾಲ್ಗೊಂಡಿರುವುದು.





ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಮರಹತ್ತುವ ಸಾಹಸ ಕ್ರೀಡೆಯಲ್ಲಿ ತೊಡಗಿಸಿಕೊಡಿರುವುದನ್ನು ಕಾಣಬಹುದು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Monthly Published by

**The Bharat Scouts & Guides, Karnataka**

State Headquarters, Shanthigruha

# 39, Palace Road, Bengaluru-560 001

Tel : 080-2226 0017, 2226 7470



**ಪರಿವಿಡಿ**



**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/-** ಚಂದಾಹಣವನ್ನು

ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ

ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001

ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org | www.kondajjibasappa.org**

**Face book ground Link: BSGKJamborette2015**

# ರಾಜ್ಯ ಕಾರ್ಯದರ್ಶಿಗಳ ನುಡಿ . . .

ಪ್ರಿಯರೆ,

ಕನ್ನಡಿಗರ ಹೆಮ್ಮೆಯ ಕವಿ ಪಂಪ ತನ್ನ ಕಾವ್ಯ ಪುರಾಣದಲ್ಲಿ "ಮನುಷ್ಯ ಕುಲಂ ತಾನೊಂದೇ ವಲಂ" ಎಂದು ಸುಮಾರು ಒಂದು ಸಾವಿರ ವರ್ಷಗಳ ಹಿಂದೆಯೇ ಇಡೀ ಜಗತ್ತಿಗೆ ಸಂದೇಶ ನೀಡಿದ್ದಾರೆ. ಇದೇ ರೀತಿ ನಮ್ಮ ರಾಷ್ಟ್ರಕವಿ ಕುವೆಂಪು ಅವರು ವಿಶ್ವ ಮಾನವ ಸಂದೇಶದಲ್ಲಿ "ಏನಾದರೂ ಆಗು ಮೊದಲು ಮಾನವನಾಗು" ಎಂದು ಸಾರ್ವತ್ರಿಕ ಮೌಲ್ಯವನ್ನು ಸ್ಮರಿಸಿದ್ದಾರೆ.

ಇದೆಲ್ಲವೂ ಈಗ ನನ್ನ ಅನುಭವಕ್ಕೆ ಹತ್ತಿರವಾಗುತ್ತಿದೆ. ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಹಾಗೂ ಗೈಡ್ಸ್‌ನ ತರಬೇತಿ ಕೇಂದ್ರದಲ್ಲಿ ಐದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿ/ವಿದ್ಯಾರ್ಥಿನಿಯರ ನಡುವೆ ನಿಂತು ಮನುಷ್ಯನ ಸಾರ್ವತ್ರಿಕ ಮೌಲ್ಯಗಳ ಬಗ್ಗೆ ಚಿಂತಿಸುವಾಗ ಇದೆಲ್ಲವೂ ನನ್ನ ನೆನಪಿಗೆ ಬರುತ್ತಿದೆ. ಕೇವಲ ಕಾಂಪೌಂಡ್ ಗೋಡೆಗಳ ಬಂಧನದಲ್ಲಿ ಹೋಮ್‌ವರ್ಕ್, ಸಮವಸ್ತ್ರಗಳು, ಶಿಕ್ಷಕರ ನಡುವಿನ ಪೆನ್ನು ನೋಟ್ ಬುಕ್‌ಗಳ ಪಂಜರದಲ್ಲಿ ಬಂಧಿಯಾಗಿರುತ್ತಿದ್ದ ಮಕ್ಕಳು ಇಲ್ಲಿ ಹಕ್ಕಿಗಳಂತೆ ಹಾರುತ್ತಿದ್ದಾರೆ. ಚಿಗುರು ಗರಿಕೆಗಳ ನಡುವೆ ಸರ್ವ ಸ್ವತಂತ್ರವಾಗಿ ಜಿಗಿಯುವ ಮೊಲ ಜಿಂಕೆಗಳ ಹಾಗೆ ಈ ವಿದ್ಯಾರ್ಥಿಗಳು ಸಂಭ್ರಮಿಸುತ್ತಿದ್ದಾರೆ.

ಇಲ್ಲಿ ಯಾವುದೇ ಧರ್ಮ, ಜಾತಿ, ಪಂಥಗಳಿಲ್ಲ. ಬಣ್ಣ, ಭಾಷೆಗಳ ಗಡಿ ರೇಖೆಯ ಗೋಡೆಗಳಿಲ್ಲ. ವಿದ್ಯಾರ್ಥಿಗಳು ಆಟವಾಡುತ್ತಾ ಶಿಕ್ಷಣ ಕಲಿಯ ಬೇಕು. ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡೇ ಸಜ್ಜನ ವ್ಯಕ್ತಿತ್ವ ರೂಢಿಸಿಕೊಂಡು ಬದುಕುವ ವಿಧಾನವನ್ನು ಕಲಿಯಬೇಕು. ಇದು ನಮ್ಮ ಸ್ಕೌಟ್ ಹಾಗೂ ಗೈಡ್‌ನ ಜಾಂಬೋರೇಟ್‌ನ ತರಬೇತಿ ಶಿಬಿರ ಕೇಂದ್ರದಲ್ಲಿರುವ ಸ್ಕೌಟ್-ಗೈಡ್‌ಗಳ ಮನ ಮುಟ್ಟಿದೆ. ಕುವೆಂಪು ಆಶಯದಂತೆ ಮೊದಲು ನಮ್ಮ ಮಕ್ಕಳ ಮನುಕುಲದಲ್ಲಿ ಮಾನವರಾಗಿ ಪರಸ್ಪರ ಸಹೋದರ/ಸಹೋದರಿಯರಂತೆ ಬದುಕುವುದನ್ನು ಕಲಿಸುವುದೇ ನಿಜವಾದ ಶಿಕ್ಷಣ. ಮನುಷ್ಯನಾದವನಿಗೆ ಯಾವುದೇ ಜಾತಿ, ಮತ, ಪಂಥಗಳ ಗಡಿ ಇರಬಾರದು ಎಂದು ಸಾರಿದ ಮಹಾಕವಿ ಪಂಪನ ಅನಿಸಿಕೆಯಂತೆ, ನಮ್ಮ ಸ್ಕೌಟಿಂಗ್ ಹಾಗೂ ಗೈಡಿಂಗ್‌ನ ಶೈಕ್ಷಣಿಕ ಚಟುವಟಿಕೆಗಳಿವೆ. ಒಂದರ್ಥದಲ್ಲಿ ಸ್ಕೌಟ್ ಹಾಗೂ ಗೈಡ್ ಚಳವಳಿ ನಾಗರಿಕ ಸಮಾಜದಲ್ಲಿ ಅರ್ಥಪೂರ್ಣ ವ್ಯಕ್ತಿತ್ವದತ್ತ ವಿದ್ಯಾರ್ಥಿ ಸಮುದಾಯವನ್ನು ಕೊಂಡೊಯ್ಯುತ್ತದೆ.

* * *

ಕಳೆದ ಮೂರು ತಿಂಗಳ ಹಿಂದೆ ಈ ಚಳವಳಿಯ ರಾಜ್ಯ ಕಾರ್ಯದರ್ಶಿಯಾಗಿ ಹುದ್ದೆ ವಹಿಸಿಕೊಂಡ ಆರಂಭದಲ್ಲೇ ಜಾಂಬೋರೇಟ್-2015ನ್ನು ದೊಡ್ಡಬಳ್ಳಾಪುರ ತರಬೇತಿ ಶಿಬಿರ ಕೇಂದ್ರದಲ್ಲಿ ಯಶಸ್ವಿಯಾಗಿಸುವ ನಿರ್ಧಾರ ತೆಗೆದುಕೊಂಡಿದ್ದೆವು. ಇದಕ್ಕೆ ಬೇಕಾದ ಅಗತ್ಯ ಮೂಲಭೂತ ಸೌಕರ್ಯಗಳನ್ನು ಸೃಷ್ಟಿಸುವ ಅನಿವಾರ್ಯತೆಯೂ ನಮ್ಮ ಎದುರಿಗಿತ್ತು. ರಾಜ್ಯದ ಮುವತ್ತಮೂರು ಜಿಲ್ಲೆಗಳಿಂದ ಬರುವ ವಿದ್ಯಾರ್ಥಿ ಸಮುದಾಯದ ಜೊತೆಗೆ ಅವರ ನೇತೃತ್ವ ವಹಿಸುವ ಶಿಕ್ಷಕರು ಹಾಗೂ ಸ್ಕೌಟ್ ಮತ್ತು ಗೈಡ್‌ನ ತರಬೇತಿ ನೀಡುವ ನಾಯಕರುಗಳ ವಾಸ್ತವ್ಯಕ್ಕೆ, ಊಟೋಪಚಾರಕ್ಕೆ ಕುಡಿಯುವ ನೀರು, ಶೌಚಾಲಯ ನಿರ್ಮಾಣ ಇತ್ಯಾದಿ.,

ಸೌಕರ್ಯಗಳನ್ನು ತಾತ್ಕಾಲಿಕವಾಗಿ ನಿರ್ಮಿಸಬೇಕಾಗಿತ್ತು. ಜೊತೆಗೆ ಭದ್ರತೆ ಮತ್ತು ಇತರ ಸೌಕರ್ಯಗಳುನ್ನು ಒದಗಿಸಿದ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರನ್ನು ಕೃತಜ್ಞತೆಯಿಂದ ಅಭಿನಂದಿಸಬೇಕು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಡಳಿತ, ಪೊಲೀಸ್ ಇಲಾಖೆಯ ಹಿರಿಯ ಅಧಿಕಾರಿಗಳು, ಕರ್ನಾಟಕ ಲೋಕೋಪಯೋಗಿ ಇಲಾಖೆ, ಬೆಸ್ಕಾಂ, ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್ ಹಾಗೂ ಬಾಶೆಟ್ಟಿಹಳ್ಳಿ ಗ್ರಾಮ ಪಂಚಾಯತಿ, ಬೆಂಗಳೂರು ನೀರು ಸರಬರಾಜು ಮಂಡಳಿ ಸೇರಿದಂತೆ ಎಲ್ಲಾ ಅಧಿಕಾರಿ ವರ್ಗ ಹಾಗೂ ಸಿಬ್ಬಂದಿ ವರ್ಗದವರಿಗೆ ನಾವು ಅಭಾರಿಯಾಗಿದ್ದೇವೆ. ಭದ್ರತೆ ಹಾಗೂ ಕಡಿಯುವ ನೀರು ಹಾಗು ಸ್ನಾನಗೃಹಗಳನ್ನು ನಿರ್ಮಿಸಲು ಸರ್ಕಾರದ ವಿವಿಧ ಇಲಾಖೆಗಳ ಸಿಬ್ಬಂದಿ ವರ್ಗ ಹಾಗೂ ಸ್ಕೌಟ್ ಹಾಗೂ ರಾಜ್ಯ ಗೈಡ್‌ನ ಪದಾಧಿಕಾರಿಗಳು ಆದ್ಯತೆ ನೀಡಿದ್ದಾರೆ.

ದಿನಾಂಕ 17 ರಿಂದ 23 ಜನವರಿ 2015ರವರೆಗೆ ನಡೆಯುವ ಈ ರಾಜ್ಯ ಜಾಂಬೋರೇಟ್ 2015ರ ಸ್ಕೌಟ್ ಮತ್ತು ಗೈಡ್‌ನ ಜಾತ್ರೆಗೆ ಕರ್ನಾಟಕದ ಘನವೆತ್ತ ರಾಜ್ಯಪಾಲರ ಸೂಕ್ತ ಸಂದೇಶದೊಂದಿಗೆ ಆರಂಭಗೊಂಡಿದೆ. ಸಚಿವರುಗಳಾದ ಸನ್ಮಾನ್ಯ ಶ್ರೀ ಡಿ.ಕೆ. ಶಿವಕುಮಾರ್ ಹಾಗೂ ಶ್ರೀ.ಯು.ಟಿ. ಖಾದರ್ ಅವರು ಸಮಾರಂಭದಲ್ಲಿ ಹಾಜರಿದ್ದು ಸಭೆಯ ಘನತೆಯನ್ನು ಹೆಚ್ಚಿಸಿದ್ದಾರೆ. ಈ ಸಂಧರ್ಭದಲ್ಲಿ ಈ ಜಾಂಬೋರೇಟ್ ಯಶಸ್ವಿಯಾಗಲು ಕಾರಣರಾದ ಸ್ಕೌಟ್ ಮತ್ತು ಗೈಡ್‌ನ ಎಲ್ಲ ಕಾರ್ಯಕರ್ತರುಗಳು ಸಿಬ್ಬಂದಿ ವರ್ಗದ ಶ್ರಮವನ್ನು ನಾನು ಹೊಗಳುವುದರ ಮೂಲಕ, ನಮ್ಮ ಬೆನ್ನುಗಳನ್ನು ನಾವೇ ತಟ್ಟಿಕೊಳ್ಳುವ ಪುನರಾವರ್ತನೆ ಅಗತ್ಯವಿಲ್ಲ ಎಂದು ಭಾವಿಸಿದ್ದೇನೆ, ಇದು ನಮ್ಮೆಲ್ಲರ ಜವಾಬ್ದಾರಿ ಹಾಗು ಕರ್ತವ್ಯವಾಗಿತ್ತು.

ಜನವರಿ 17ರ ಸಮಾರಂಭದ ಉದ್ಘಾಟನೆಯ ನಂತರ ಜಾಂಬೋರೇಟ್ 2915ರ ವಿಶೇಷ ಸ್ಮರಣ ಸಂಚಿಕೆಗಾಗಿ ಸಂದೇಶವನ್ನು ಆತುರಾತುರಾವಾಗಿ ಬರೆದಿದ್ದೇನೆ. ಮಕ್ಕಳ ಪಠ್ಯೇತರ ಶೈಕ್ಷಣಿಕ ದೊಡ್ಡ ಜಾಂಬೋರೇಟ್‌ನ್ನು ನೋಡಿ ನನಗೆ ಮಹಾಕವಿ ಪಂಪ ಹಾಗೂ ಕುವೆಂಪು ಅವರ ವಿಶ್ವಮಾನವ ಕಲ್ಪನೆಯ ಸಾಕಾರವಾಯಿತು, ಈ ಜಾಂಬೋರೇಟ್‌ನಲ್ಲಿ ಭಾಗವಹಿಸಿರುವ ಮಕ್ಕಳು ಭವಿಷ್ಯದಲ್ಲಿ ದೇಶದ ಸದೃಢ ಪ್ರಜೆಗಳಾಗುತ್ತಾರೆ ಎಂಬ ಭರವಸೆ ಹೊಂದಿದ್ದೇನೆ.

ಈ ಸಂದರ್ಭದಲ್ಲಿ ರಾಜ್ಯ ಸಂಸ್ಥೆ ಪ್ರಕಟಿಸಿದ ವಿಶೇಷ ಸ್ಮರಣ ಸಂಚಿಕೆಗೆ ಲೇಖನ ಹಾಗೂ ಆರ್ಥಿಕ ಸಂಪನ್ಮೂಲಕ್ಕಾಗಿ ವಿಶೇಷ ಜಾಹೀರಾತುಗಳನ್ನು ನೀಡಿದ ವಿವಿಧ ಇಲಾಖೆಗಳ ಮುಖ್ಯಸ್ಥರುಗಳಿಗೆ ಮತ್ತು ಕಾರ್ಪೊರೇಟ್ ಕಂಪನಿಗಳ ಆಡಳಿತಗಾರರಿಗೆ ಧನ್ಯವಾದಗಳನ್ನು ಹೃದಯಪೂರ್ವಕವಾಗಿ ಅರ್ಪಿಸುತ್ತೇನೆ. ಚಳವಳಿಯ ಬೆಳವಣಿಗೆಯಲ್ಲಿ ನಿಮ್ಮ ಸಹಾಯ-ಸಹಕಾರ ಸದಾ ನಮ್ಮೊಂದಿಗಿರಲಿ ಎಂದು ಆಶಿಸುತ್ತೇನೆ.

ಸ್ಕೌಟ್-ಗೈಡ್ ಶುಭಾಶಯಗಳೊಂದಿಗೆ,

ತಮ್ಮ ವಿಶ್ವಾಸಿ

ಸಿದ್ದಯ್ಯ
ರಾಜ್ಯ ಕಾರ್ಯದರ್ಶಿ

ಕರ್ನಾಟಕ ಸರ್ಕಾರ

## ಕಾಲೇಜು ಶಿಕ್ಷಣ ಇಲಾಖೆ

ಸಂಖ್ಯೆ: ಕಾಶಿಇ/ಶೈವಿ/47/ರೋರೇಶಿ/2014-15

ಕಾಲೇಜು ಶಿಕ್ಷಣ ಆಯುಕ್ತರ ಕಛೇರಿ,
ಶೇಷಾದ್ರಿ ರಸ್ತೆ, ಬೆಂಗಳೂರು-560001.
ದಿನಾಂಕ: 12 /02/2015.



### ಸುತ್ತೋಲೆ

ವಿಷಯ: ರಾಜ್ಯದ ಎಲ್ಲಾ ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಕರ್ನಾಟಕ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಮಾಸಿಕ ವಾರ್ತಾ ಪತ್ರಿಕೆಗೆ ವಾರ್ಷಿಕ ಚಂದಾದಾರರಾಗುವ ಬಗ್ಗೆ.

ಉಲ್ಲೇಖ: ರಾಜ್ಯ ಕಾರ್ಯದರ್ಶಿಗಳು, ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಇವರ ಪತ್ರ ಸಂಖ್ಯೆ: ಬಿಎಸ್‌ಜಿ/ಎಸ್‌ಹೆಚ್‌ಕ್ಯೂ/ಜಿಡಬ್ಲ್ಯು/1560/2014-15 ದಿನಾಂಕ: 29-11-2014.

* * * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಕಳೆದ ಐದು ದಶಕಗಳಿಂದ ಕರ್ನಾಟಕ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಮಾಸಿಕ ವಾರ್ತಾ ಪತ್ರಿಕೆಯನ್ನು ಹೊರಡಿಸುತ್ತಿದ್ದು, ಸದರಿ ವಾರ್ತಾ ಪತ್ರಿಕೆಯಲ್ಲಿ ರಾಜ್ಯದಲ್ಲಿ ಜರುಗುವ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಚಟುವಟಿಕೆಗಳನ್ನು ವರದಿ ಮಾಡುತ್ತಾ ವಿದ್ಯಾರ್ಥಿಗಳಿಗೆ ತುಂಬಾ ಸಹಕಾರಿಯಾಗಿರುವುದರಿಂದ ಸದರಿ ಪತ್ರಿಕೆಯನ್ನು ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳಿಗೆ ಸ್ಕೌಟ್ಸ್ ಅಂಡ್ ಗೈಡ್ಸ್ ವಾರ್ತಾ ಪತ್ರಿಕೆಗೆ ವಾರ್ಷಿಕ ಚಂದಾದಾರರಾಗಲು ಸೂಚಿಸಬೇಕೆಂದು ಉಲ್ಲೇಖಿತ ಪತ್ರದಲ್ಲಿ ಕೋರಿರುತ್ತಾರೆ.

ಪರಿಶೀಲಿಸಲಾಗಿ, ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಹೊರತರುತ್ತಿರುವ ಮಾಸಿಕ ವಾರ್ತಾ ಪತ್ರಿಕೆಯು ರಾಜ್ಯದಲ್ಲಿ ಜರುಗುವ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳ ವರದಿಗಳು, ಜಿಲ್ಲಾ ಕೇಂದ್ರಗಳಲ್ಲಿ ಆಯೋಜಿಸುವ ರೋವರ್ಸ್/ರೇಂಜರ್ಸ್ ಚಟುವಟಿಕೆಗಳು, ತರಬೇತಿ ಕಾರ್ಯಕ್ರಮಗಳು, ರ್‍ಯಾಲಿಗಳು ಹಾಗೂ ಸಮುದಾಯ ಸೇವಾ ಚಟುವಟಿಕೆಗಳನ್ನು ಸದರಿ ವಾರ್ತಾ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದು, ಸದರಿ ಪತ್ರಿಕೆಯು ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗೆ ಸಹಕಾರಿಯಾಗಲಿರುವುದರಿಂದ ಈ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ/ಖಾಸಗಿ ಅನುದಾನಿತ ಪದವಿ ಕಾಲೇಜುಗಳ ಸ್ಕೌಟ್ಸ್-ಗೈಡ್ಸ್ ವಾರ್ತಾ ಪತ್ರಿಕೆಗೆ ವಾರ್ಷಿಕ ರೂ.100/- ಗಳನ್ನು ಕಾಲೇಜುಗಳ ಸ್ಕೌಟ್ಸ್ ಅಂಡ್ ಗೈಡ್ಸ್ ಘಟಕಗಳ ಖಾತೆಯಿಂದ ಭರಿಸಿ, ಸದರಿ ವಾರ್ತಾ ಪತ್ರಿಕೆಗೆ ಚಂದಾದಾರರಾಗುವಂತೆ ಸೂಚಿಸಿದೆ.

ಟಿಪ್ಪಣಿ ಆಯುಕ್ತರಿಂದ ಅನುಮೋದಿಸಲ್ಪಟ್ಟಿದೆ

ಕಾಲೇಜು ಶಿಕ್ಷಣ ನಿರ್ದೇಶಕರು

ಇವರಿಗೆ:

1. ಜಂಟಿ ನಿರ್ದೇಶಕರು, ಪ್ರಾದೇಶಿಕ ಕಛೇರಿ, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಮೈಸೂರು, ಶಿವಮೊಗ್ಗ, ಮಂಗಳೂರು, ಧಾರವಾಡ, ಗುಲಬರ್ಗಾ. - ತಮ್ಮ ವ್ಯಾಪ್ತಿಗೆ ಬರುವ ಎಲ್ಲಾ ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ರವಾನಿಸಲು ಸೂಚಿಸಲಾಗಿದೆ.
2. ರಾಜ್ಯ ಕಾರ್ಯದರ್ಶಿಗಳು, ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಶಾಂತಿಗೃಹ, ನಂ: 39, ಅರಮನೆ ರಸ್ತೆ, ಮಹಾರಾಣಿ ವಿಜ್ಞಾನ ಕಾಲೇಜು ಪಕ್ಕ, ಬೆಂಗಳೂರು.

ಕರ್ನಾಟಕ  ಸರ್ಕಾರ

**ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು**

ಸಂಖ್ಯೆ:ದೈಶಿ:ಸ್ಕೌ.ಗೈ.ವಾ.ಚಂ/70/2014-14 ದಿನಾಂಕ:06.12.2014

**ಸುತ್ತೋಲೆ**

ವಿಷಯ: ರಾಜ್ಯದ ಎಲ್ಲಾ ಖಾಸಗಿ ಮತ್ತು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ 'ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾಪತ್ರಿಕೆ'ಯ ವಾರ್ಷಿಕ ಚಂದಾ ನೀಡಿ ಚಂದಾದಾರರಾಗುವ ಬಗ್ಗೆ.

ಉಲ್ಲೇಖ:1. ರಾಜ್ಯ ಕಾರ್ಯದರ್ಶಿ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ:ಬಿಎಸ್‌ಜಿ/ಎಸ್‌ಹೆಚ್‌ಕ್ಯೂ:559/14-15 ದಿ: 29.11.2014
2. ಮಾನ್ಯ ಆಯುಕ್ತರು, ಸಾ.ಶಿ.ಇಲಾಖೆ, ಬೆಂಗಳೂರು, ಇವರ ಅಧ್ಯಕ್ಷತೆಯಲ್ಲಿ ದಿನಾಂಕ:18.06.2014 ರಂದು ನಡೆದ ಸಭೆಯ ನಡಾವಳಿ.



ರಾಜ್ಯದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳೊಂದಿಗೆ ಶಿಸ್ತು, ಸಂಯಮ, ದೇಶಪ್ರೇಮ, ನಡತೆ,ಆರೋಗ್ಯ ಕರಕೌಶಲ್ಯ, ಸೇವಾಮನೋಭಾವ ಹಾಗೂ ಉತ್ತಮ ಗುಣಗಳನ್ನು ರೂಢಿಸುವ ಸಲುವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳನ್ನು ಪಠ್ಯೇತರ ಚಟುವಟಿಕೆಗಳಾಗಿ ಅಳವಡಿಸಿಕೊಳ್ಳಲಾಗಿದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರಾಜ್ಯದಲ್ಲಿ ಕಳೆದ ಐದು ದಶಕಗಳಿಂದ " ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾಪತ್ರಿಕೆ" ಯನ್ನು ಹೊರಡಿಸುತ್ತಿದೆ. ಸದರಿ ವಾರ್ತಾಪತ್ರಿಕೆಯಲ್ಲಿ ರಾಜ್ಯದಲ್ಲಿ ಜರುಗುವ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳ ವರದಿಗಳು, ಜಿಲ್ಲೆಗಳಲ್ಲಿ/ಶಾಲೆಗಳಲ್ಲ ಆಯೋಜಿಸುವ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳ ಚಟುವಟಿಕೆಗಳು ಹಾಗೂ ತರಬೇತಿಗಳು, ರ್‍ಯಾಲಿಗಳು ಹಾಗೂ ರಾಜ್ಯ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಂಸ್ಥೆಯವರು ಏರ್ಪಡಿಸುವ ಕಾರ್ಯಕ್ರಮಗಳ ವಿವರ ಹಾಗೂ ಸಮುದಾಯ ಸೇವಾ ಶಿಬಿರಗಳಲ್ಲಿ ಸ್ಕೌಟ್ಸ್ – ಗೈಡ್ಸ್‌ಗಳ ಸಕ್ರಿಯವಾಗಿ ಭಾಗವಹಿಸುವ ಮಾಹಿತಿಯನ್ನು ವಾರ್ತಾ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತಿದೆ.

ಈ ಹಿನ್ನಲೆಯಲ್ಲಿ ರಾಜ್ಯದಲ್ಲೆಡೆ ಜರುಗುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳ ಎಲ್ಲಾ ಮಾಹಿತಿಯನ್ನು ಎಲ್ಲರಿಗೂ ತಿಳಿಸುವ ಸಂಬಂಧ ಹಾಗೂ ವಾರ್ತಾಪತ್ರಿಕೆಯ ಚಂದಾದಾರರ ಸಂಖ್ಯೆಯನ್ನು ಹೆಚ್ಚಿಸಲು ರಾಜ್ಯದ ಎಲ್ಲಾ ಖಾಸಗಿ ಮತ್ತು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ 'ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾಪತ್ರಿಕೆ'ಯ ವಾರ್ಷಿಕ ರೂ.100/- ಚಂದಾ ನೀಡಿ ಚಂದಾದಾರರಾಗುವ ಬಗ್ಗೆ ಸುತ್ತೋಲೆ ಹೊರಡಿಸಬೇಕೆಂದು ರಾಜ್ಯ ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಬೆಂಗಳೂರು ಇವರು ಪ್ರಕಟಿಸುತ್ತಿರುವ " ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಿಕ ವಾರ್ತಾಪತ್ರಿಕೆ" ಯನ್ನು ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸಂಬಂಧಿಸಿದಂತೆ ಕಬ್,ಬುಲ್ ಬುಲ್, ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳನ್ನು ಪ್ರಾರಂಭಿಸಿರುವ ಸರ್ಕಾರಿ/ಅನುದಾನಿತ/ಅನುದಾನ ರಹಿತ ಶಾಲೆಗಳಲ್ಲಿ ಸದರಿ ವಾರ್ತಾಪತ್ರಿಕೆಗೆ ವಾರ್ಷಿಕ ಚಂದಾ ರೂ.100/- (ನೂರು ರೂಗಳು ಮಾತ್ರ) ಗಳನ್ನು ನೀಡಿ ಪ್ರಸ್ತುತ ಸಾಲಿನಿಂದ ಚಂದಾದಾರರಾಗಲು ಅನುಮತಿ ನೀಡಿದೆ. ವಾರ್ಷಿಕ ಚಂದಾ ಹಣವನ್ನು ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಬೆಂಗಳೂರು ಸಂಸ್ಥೆಗೆ ಪಾವತಿಸಿ ಸೂಕ್ತ ರಸೀತಿಯನ್ನು ಪಡೆಯುವುದು.

ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ.ಬೆಂಗಳೂರು

ಪ್ರತಿ:

1. ಅಪರ ಆಯುಕ್ತರು, ಧಾರವಾಡ ಮತ್ತು ಗುಲ್ಬರ್ಗಾ ಇವರಿಗೆ ಮಾಹಿತಿಗಾಗಿ
2. ರಾಜ್ಯದ ಎಲ್ಲಾ ಜಿಲ್ಲಾ ಉಪ ನಿರ್ದೇಶಕರುಗಳಿಗೆ ಸೂಕ್ತ ಕ್ರಮಕ್ಕಾಗಿ.
3. ರಾಜ್ಯದ ಎಲ್ಲಾ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ.
4. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಕಳುಹಿಸುತ್ತಾ ನಿಮ್ಮ ಹಂತದಲ್ಲಿ ಸೂಕ್ತ ಕ್ರಮ ಕೈಗೊಳ್ಳಲು ತಿಳಿಸಿದೆ.
5. ರಾಜ್ಯ ಕಾರ್ಯದರ್ಶಿ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಬೆಂಗಳೂರು, ಪ್ರೋ:ಪಿ.ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ, ಕೋಟೆ , ಬೆಂಗಳೂರು-02
6. ಕಛೇರಿ ಪ್ರತಿ.

## ರಾಜ್ಯ ವಾರ್ತೆಗಳು

**27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್ ದಿನಾಂಕ 17-01-2015 ರಿಂದ 23-01-2015 ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಡೆದ ವರದಿ.**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಏಳುದಿನ ನಡೆದ 27ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಜಾಂಬೋರೇಟ್ 2015ರ ಸಮಾವೇಶ ಅವಿಸ್ಮರಣೀಯುವಾಗಿತ್ತು. ಈ ಜಾಂಬೋರೇಟ್‌ನಲ್ಲಿ ಸುಮಾರು 5000 ಸ್ಕೌಟ್ಸ್/ಗೈಡ್ಸ್/ರೋವರ್ಸ್/ರೇಂಜರ್ಸ್, ದಳನಾಯಕ/ದಳನಾಯಕಿಯರು, ಪೋಷಕರು, ತರಬೇತುದಾರರು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಪದಾಧಿಕಾರಿಗಳು, ಚಳವಳಿಯ ಹಿತೈಷಿಗಳು ಭಾಗವಹಿಸಿದ್ದರು.

27ನೇ ಜಾಂಬೋರೇಟ್‌ನ್ನು ದಿವಂಗತ ಕೊಂಡಜ್ಜಿ ಬಸಪ್ಪನವರ ಜನ್ಮ ಶತಮಾನೋತ್ಸವ ಸ್ಮರಣಾರ್ಥ ಆಚರಿಸಲಾಗಿದೆ. ಕೊಂಡಜ್ಜಿ ಬಸಪ್ಪನವರು ಕೇಂದ್ರ ಸರ್ಕಾರದಲ್ಲಿ ಸಚಿವರಾಗಿದ್ದರು. ಸಕ್ರಿಯ ರಾಜಕಾರಣದಲ್ಲಿದ್ದುಕೊಂಡೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಅವರ ಕೊಡುಗೆ ಅಪಾರವಾದದ್ದು. ಸುಮಾರು ಇಪ್ಪತ್ತೊಂದು ವರ್ಷ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ. ಅವಧಿಯಲ್ಲಿಯೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ ಸುಮಾರು 120 ಎಕರೆಗಳು ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರವನ್ನು ಅಭಿವೃದ್ಧಿಗೊಳಿಸಿದರು ಹಾಗೂ ದಾವಣಗೆರೆ ಸಮೀಪ ಕೊಂಡಜ್ಜಿಯಲ್ಲಿ 95 ಎಕರೆಗಳು ವಿಸ್ತೀರ್ಣದಲ್ಲಿ ಸ್ಕೌಟ್ಸ್ ಹಾಗೂ ಗೈಡ್ಸ್‌ಗಾಗಿ ತರಬೇತಿ ಮತ್ತು ಶಿಬಿರ ಕೇಂದ್ರವನ್ನು ಸರ್ಕಾರದಿಂದ ಮಂಜೂರು ಮಾಡಿಸಿ ಅಭಿವೃದ್ಧಿಗೊಳಿಸಿದರು ದಿವಂಗತ ಕೊಂಡಜ್ಜಿ ಬಸಪ್ಪನವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ನೀಡಿರುವ ಈ ಕೊಡುಗೆಗಳನ್ನು ನೆನೆಯುತ್ತಾ ಜಾಂಬೋರೇಟನ್ನು ಅವರ ಗೌರವಾರ್ಥವಾಗಿ ಅವರಿಗೆ ಸಮರ್ಪಿಸಲಾಗಿದೆ.

ಈ ಜಾಂಬೋರೇಟ್‌ನ ಘೋಷ ವಾಕ್ಯ "ನೆಲ ಜಲ ರಕ್ಷಣೆ ನಮ್ಮ ಹೊಣೆ" ಎಂಬುದಾಗಿತ್ತು. ನೀರು, ಭೂಮಿಯ ರಕ್ಷಣೆಯನ್ನು ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂಬುದೇ ಈ ಘೋಷ ವಾಕ್ಯದ ಅರ್ಥವಾಗಿದೆ. ಜಾಂಬೋರೇಟ್‌ಗಾಗಿಯೇ ವಿಶೇಷ ಗೀತೆಯನ್ನು ಸಾಹಿತಿ ಶ್ರೀ ಗೊ.ರು. ಚನ್ನಬಸಪ್ಪ ಅವರು ರಚಿಸಿದ್ದರು. ಈ ಗೀತೆಗೆ ಸಂಗೀತ ವಿದೂಷಿ ಶ್ರೀಮತಿ ಕಸ್ತೂರಿ ಶ್ರೀಧರ್, ರಾಗ ಸಂಯೋಜನೆ ಮಾಡಿದರು. ಬೆಂಗಳೂರಿನ ಯಲಹಂಕದಲ್ಲಿರುವ ಎಂ.ಇ.ಎಸ್. ಶಾಲೆಯ ವಿದ್ಯಾರ್ಥಿಗಳು ಈ ಹಾಡಿಗೆ ಧ್ವನಿ ನೀಡಿ ಸುಶ್ರಾವ್ಯವಾಗಿ ಹಾಡಿದರು. ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದ ಸ್ಕೌಟ್ ಮತ್ತು ಗೈಡ್‌ಗಳು ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಈ ಹಾಡಿಗೆ ಧ್ವನಿ ನೀಡಿ ಜನಪ್ರಿಯಗೊಳಿಸಿದರು.

ಈ ಜಾಂಬೋರೇಟ್‌ಗೆ ರಾಜ್ಯದ 33 ಜಿಲ್ಲೆಗಳಿಂದ ಆಗಮಿಸಿದ್ದ ಐದು ಸಾವಿರಕ್ಕೂ ಹೆಚ್ಚು ಸ್ಕೌಟ್-ಗೈಡ್ ಹಾಗು ದಳನಾಯಕರುಗಳ ವಾಸ್ತವ್ಯಕ್ಕಾಗಿ ಎಲ್ಲಾ ರೀತಿಯ ಮೂಲ ಸೌಕರ್ಯಗಳನ್ನು ಸೃಷ್ಟಿಸಲಾಗಿತ್ತು. 400 ಗುಡಾರಗಳು, ಏಳೂ ದಿನಗಳ ಕಾಲ ಯಾವುದೇ ವ್ಯತ್ಯಾಸವಿಲ್ಲದೇ ನೀರು ಮತ್ತು ವಿದ್ಯುತ್ ಸೌಕರ್ಯ, ಬಿಸಿನೀರಿನ ವ್ಯವಸ್ಥೆ, 24 ಗಂಟೆಗಳ ಕಾಲ ತುರ್ತು ವೈದ್ಯಕೀಯ ಚಿಕಿತ್ಸಾ ಘಟಕ ಮತ್ತು ಪೋಲೀಸ್ ಭದ್ರತೆಯನ್ನು ಒದಗಿಸಲಾಗಿತ್ತು ಹಾಗೂ ಆಹಾರ ಸಾಮಾಗ್ರಿಗಳು, ತರಕಾರಿ, ಹಣ್ಣು, ಹಾಲಿನ ಉತ್ಪನ್ನಗಳು, ಅಡಿಗೆ ಅನಿಲದ ಮಳಿಗೆಗಳನ್ನೂ ಯೋಜಿಸಲಾಗಿತ್ತು.

ಜನವರಿ 17ರ, ಮುಂಜಾನೆಯಿಂದಲೇ ಸ್ಕೌಟ್ ಹಾಗೂ ಗೈಡ್‌ಗಳು, ತರಬೇತಿ ನಾಯಕರು ಮತ್ತು ದಳ ನಾಯಕ/ನಾಯಕಿಯರು ದೊಡ್ಡಬಳ್ಳಾಪುರದ ಶಿಬಿರ ಕೇಂದ್ರದಲ್ಲಿ ತಮಗೆ ನಿಗದಿಯಾಗಿದ್ದ ಬಿಡಾರಗಳಲ್ಲಿ ವಾಸ್ತವ್ಯ ಹೂಡಿದ್ದರು. ಆ ರಾತ್ರಿ ನಡೆದ ಸುಂದರವಾದ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಸ್ಥಳೀಯ ಶಾಲೆಗಳ ಪ್ರತಿಭೆಗಳು ಎಲ್ಲರ ಮನಸ್ಸನ್ನು ಸೂರೆಗೊಂಡವು. ಶ್ರೀ ಕೆ.ಎಮ್. ಗುರುರಾಜ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಎನ್. ಹನುಮಂತಗೌಡ, ಜಿಲ್ಲಾ ಪಂಚಾಯಿತಿ ಸದಸ್ಯರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಬಿ.ಕೆ. ಶಿವಪ್ಪ, ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ಈ ಶಿಬಿರಾಗ್ನಿಯಲ್ಲಿ ಉಪಸ್ಥಿತರಿದ್ದರು.

ದಿನಾಂಕ 18-01-2015 ರಂದು ಬೆಳಗ್ಗೆ ನಿಗದಿತ ಸಮಯಕ್ಕೆ ಕರ್ನಾಟಕ ರಾಜ್ಯದ ಘನತೆವೆತ್ತ ರಾಜ್ಯಪಾಲರು ಹಾಗು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಪೋಷಕರು ಆದ ಶ್ರೀ. ವಾಜುಭಾಯಿ ರೂಢಬಾಯಿ ವಾಲಾರವರು ಆಗಮಿಸಿದರು. ಗೌರವ ವಂದನೆಯನ್ನು ಸ್ವೀಕರಿಸಿದ ನಂತರ ರಾಜ್ಯಪಾಲರು 27ನೇ ಜಾಂಬೋರೇಟನ್ನು ಬಣ್ಣ-ಬಣ್ಣದ ಬಲೂನುಗಳನ್ನು ಆಕಾಶಕ್ಕೆ ಹಾರಿ ಬಿಡುವ ಮೂಲಕ ಉದ್ಘಾಟಿಸಿದರು. ಮಕ್ಕಳ ಹರ್ಷೋದ್ಗಾರವು ಆಕಾಶದತ್ತ ಏರುತ್ತಿರುವ ಬಲೂನಿನಂತೆ ಮುಗಿಲು ಮುಟ್ಟಿತ್ತು. ನಂತರ ಘನತೆವೆತ್ತ ರಾಜ್ಯಪಾಲರು ಕೊಂಡಜ್ಜಿ ಬಸಪ್ಪನವರ ಜನ್ಮಶತಮಾನೋತ್ಸವದ ಸ್ಮರಣಾರ್ಥ ವಿಶೇಷ ಅಂಚೆ ಲಕೋಟೆ ಮತ್ತು ಒಥಿ ಖಣಚಿಟಠಿಗಳನ್ನು ಬಿಡುಗಡೆ ಮಾಡಿದರು. ಇಂಧನ ಸಚಿವ ಶ್ರೀ ಡಿ.ಕೆ. ಶಿವಕುಮಾರ್, ಆರೋಗ್ಯ ಸಚಿವರಾದ ಶ್ರೀ ಯು.ಟಿ. ಖಾದರ್, ಸ್ಥಳೀಯ ಶಾಸಕರಾದ ಶ್ರೀ ಟಿ. ವೆಂಕಟರಮಣಯ್ಯ ಹಾಗೂ ಭಾರತ್ ಸ್ಕೌಟ್ಸ್ ಹಾಗೂ ಗೈಡ್ಸ್‌ನ ರಾಷ್ಟ್ರೀಯ ಮುಖ್ಯ ಆಯುಕ್ತರಾದ ಶ್ರೀ ಬಿ.ಐ. ನಾಗರಾಲೆ, ಶ್ರೀ ಮೊಹಮ್ಮದ್ ಮೊಹಿಸಿನ್, ಭಾ.ಆ.ಸೇ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ರಾಮನುಜಂ, ಮುಖ್ಯ ಅಂಚೆ ಪ್ರಧಾನಾಧಿಕಾರಿಗಳು ಉಪಸ್ಥಿತರಿದ್ದರು. ಆರೋಗ್ಯ ಸಚಿವ ಶ್ರೀ. ಯು.ಟಿ. ಖಾದರ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರದಲ್ಲಿ ಸಮಾರಂಭಕ್ಕೆ ಆಗಮಿಸಿ ವಿಶೇಷವಾಗಿ ಗಮನ ಸೆಳೆದರು.

ಸಮಾವೇಶವನ್ನುದ್ದೇಶಿಸಿ ಮಾತನಾಡಿದ ಘನತೆವೆತ್ತ ರಾಜ್ಯಪಾಲರು "ಪ್ರತಿಯೊಬ್ಬರೂ ಕಲಿಯಿರಿ – ಮತ್ತೊಬ್ಬರಿಗೆ ಕಲಿಸಿರಿ (ಇಚಿಛಿ ಅಟಿಜ ಖಿಜಚಿಛಿ ಅಟಿಜ) ಎಂದು ಕರೆ ನೀಡುವ ಮೂಲಕ ಶಿಕ್ಷಣದ ಮಹತ್ವವನ್ನು ವಿವರಿಸಿದರು. ಅಂತೆಯೇ ಪ್ರತಿಯೊಬ್ಬ ಸೌಟ್-ಗೈಡ್ ಮತ್ತೊಬ್ಬ ಸ್ಕೌಟ್-ಗೈಡ್‌ನನ್ನು ಕರೆ ತಂದರೆ (ಇಚಿಛಿ ಅಟಿಜ ಃಡಿಟಿಎ ಅಟಿಜ) ಸ್ಕೌಟ್-ಗೈಡ್ ಸಂಖ್ಯೆ ಇನ್ನು 3 ವರ್ಷಗಳಲ್ಲಿ 10 ಲಕ್ಷ ತಲುಪುವುದರಲ್ಲಿ ಸಂದೇಹವೇ ಇಲ್ಲವೆಂದರು. ಸಮಾರಂಭದಲ್ಲಿದ್ದ ಸ್ಕೌಟ್-ಗೈಡ್, ರೋವರ್ ಮತ್ತು ರೇಂಜರ್‌ಗಳಿಂದ "ಭಾರತ್ ಮಾತಾಕಿ ಜೈ" ಎಂಬ ಘೋಷಣೆಯನ್ನು ಮೂರ್‍ನಾಲ್ಕು ಬಾರಿ ಕೂಗಿಸಿದ ರಾಜ್ಯಪಾಲರು 'ಉತ್ತಮ ಪ್ರಜೆಯಾಗುವ ಹಂಬಲ ಎಲ್ಲಾ ವಿದ್ಯಾರ್ಥಿಗಳಲ್ಲಿಯೂ ಇರಬೇಕು. ಹಾಗೆಯೇ ದೇಶಪ್ರೇಮ ಮತ್ತು ಭಾವೈಕ್ಯತೆ ಬೆಳೆಸಿಕೊಳ್ಳಬೇಕೆಂದು' ಕರೆ ನೀಡಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಮುಖ್ಯ ಆಯುಕ್ತರು ಶ್ರೀ ಬಿ.ಐ. ನಾಗರಾಲೆ, ಜಾಂಬೋರೇಟ್ ಸಮಾವೇಶಕ್ಕೆ ಶುಭಕೋರಿದರು. ರಾಜ್ಯ ಮುಖ್ಯ ಆಯುಕ್ತರು ಶ್ರೀ ಪಿ.ಜಿ.ಆರ್. ಸಿಂಧ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಉತ್ತಮ ಭವಿಷ್ಯವಿದೆ ಎಂದು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಹುರಿದುಂಬಿಸುವ ಮಾತನಾಡಿದರು. ಸ್ಕೌಟ್‌ನ ರಾಜ್ಯ ಆಯುಕ್ತರು ಶ್ರೀ ಎಂ.ಎ. ಖಾಲಿದ್, ಜಾಂಬೋರೇಟ್ ಕುರಿತು ಮಾತನಾಡಿದರು. ರಾಜ್ಯಪಾಲರ ಸ್ಫೂರ್ತಿದಾಯಕ ದೇಶಪ್ರೇಮದ ಕರೆಗೆ ಓಗೊಡುವಂತೆ ಸ್ಕೌಟ್/ಗೈಡ್/ರೋವರ್/ರೇಂಜರ್‌ಗಳು "ಜಯ್ ಹೋ" ದೇಶಭಕ್ತಿ ಗೀತೆಗೆ ಹೆಜ್ಜೆ ಹಾಕುತ್ತಾ ರಾಷ್ಟ್ರಧ್ವಜ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಧ್ವಜವನ್ನು ಹೆಮ್ಮೆಯಿಂದ ಎತ್ತಿ ಹಿಡಿದು ಸಭಾಂಗಣದಲ್ಲಿ ನಲಿದಾಡಿದರು. ಗೈಡ್‌ನ ರಾಜ್ಯ ಆಯುಕ್ತರಾದ ಶ್ರೀಮತಿ ಗೀತಾ ನಟರಾಜ್ ವಂದನಾರ್ಪಣೆ ಸಲ್ಲಿಸಿದರು.

ಇದೇ ದಿನ ಸಂಜೆ ಎರಡು ವಿಶೇಷ ಸಾಂಸ್ಕೃತಿಕ ಕಾರ್ಯಗಳನ್ನು ಯೋಜಿಸಲಾಗಿತ್ತು. ದಾವಣಗೆರೆಯ ನೂಪುರ ಕಲಾ ಸಂಸ್ಥೆ ದೇಶಪ್ರೇಮ ಕುರಿತಾದ ನೃತ್ಯ ರೂಪಕವನ್ನು ಪ್ರದರ್ಶಿಸಿದರು. ಸೈನಿಕ ವಿಧವಾ ಪತ್ನಿಯರ ಬದುಕು ಕುರಿತಂತೆ ಸಾಕ್ಷ್ಯ ಚಿತ್ರವನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯ ಚಿತ್ರ ನಿಜಕ್ಕೂ ಮನ ಕಲಕುವಂತೆ ಇತ್ತು. ಈ ಸಾಕ್ಷ್ಯ ಚಿತ್ರದ ನಂತರ ಎಲ್ಲರೂ ಎದ್ದು ನಿಂತು ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಸೈನಿಕರ ಆತ್ಮಕ್ಕೆ ಶಾಂತಿ ಕೋರಿ ಧ್ವಜ ವಂದನೆ ಸಲ್ಲಿಸಿದರು. ರಾಜ್ಯದ ವಾರ್ತಾ ಮತ್ತು ಪ್ರಚಾರ ಇಲಾಖೆ ಕರ್ನಾಟಕ ದರ್ಶನ ಕುರಿತ ಲೇಸರ್ ಪ್ರದರ್ಶನವೂ ಚೆನ್ನಾಗಿತ್ತು. ಈ ಎಲ್ಲಾ ಕಾರ್ಯಕ್ರಮಗಳು ಮೌಲಿಕವಾಗಿದ್ದವು.

ಜಾಂಬೋರೇಟ್ ಮೈದಾನದಲ್ಲಿ ನಿರಂತರ ಚಟುವಟಿಕೆಗಳು ನಡೆಯುತ್ತಿದ್ದವು. ಜಾಂಬೋರೇಟ್‌ನಲ್ಲಿ ಭಾಗವಹಿಸಿರುವ ಪ್ರತಿಯೊಬ್ಬರು ಒಂದಲ್ಲ ಒಂದು ಚಟುವಟಿಕೆಯಲ್ಲಿ ಸದಾ ತೊಡಗಿಸಿಕೊಂಡಿರುವಂತೆ ಈ ಕೆಳಗಿನ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

- ದೈಹಿಕ ವ್ಯಾಯಾಮ
- ಸಮುದಾಯ ಅಭಿವೃದ್ಧಿ ಚಟುವಟಿಕೆ
- ರಸಪ್ರಶ್ನೆ
- ಬ್ಯಾಂಡ್ ಗೋಷ್ಠಿ
- ಧ್ವಜಾರೋಹಣ
- ಸಾಹಸಮಯ ಚಟುವಟಿಕೆಗಳು
- ಪಥಸಂಚಲನ
- ಯುವ ಧ್ವನಿ
- ಸ್ಕಿಲ್-ಓ-ರಮ

- ಪ್ರತಿಭಾ ಪ್ರದರ್ಶನ
- ಕವಾಯಿತು
- ಜಿಲ್ಲಾ ದರ್ಶನ
- ಚುಟುಕು ಪ್ರಹಸನ
- ಹೊರಸಂಚಾರ
- ಸಾಂಸ್ಕೃತಿಕ ಪ್ರದರ್ಶನ
- ಗೋಣಿ ಚೀಲದ ಓಟ
- ಮೂರು ಕಾಲಿನ ಓಟ
- ವಿನೋದ ಆಟಗಳು

ಈ ಸಮಾವೇಶದ ಎಲ್ಲಾ ಕಾರ್ಯಕ್ರಮಗಳನ್ನು ಸಾಂಸ್ಕೃತಿಕ ಮತ್ತು ಪಠ್ಯೇತರ ಚಟುವಟಿಕೆಗಳನ್ನು ಸಮಾವೇಶದಲ್ಲಿ ಭಾಗವಹಿಸಿದ ವಿದ್ಯಾರ್ಥಿ ಸಮುದಾಯಕ್ಕೆ ಉತ್ಸಾಹದಾಯಕವಾಗಿರುವಂತೆ ಸಂಯೋಜಿಸಲಾಗಿತ್ತು. ವಿದ್ಯಾರ್ಥಿಗಳು ಕೌಶಲ್ಯಗಳನ್ನು ಪ್ರದರ್ಶಿಸಿ ಪ್ರತಿಭೆಗಳನ್ನು ಪರಸ್ಪರ ಹಂಚಿಕೊಂಡರು. ಪ್ರತಿ ಸಂಜೆ ಉಪ ಶಿಬಿರಗಳಲ್ಲಿ ಶಿಬಿರಾಗ್ನಿ ಚಟುವಟಿಕೆಗಳು ನಡೆದವು. ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ(ಗೈ) ಮತ್ತು ರಾಜ್ಯ ಜಂಟಿ ಕಾರ್ಯದರ್ಶಿ(ಗೈ) ಇವರು ಕಾರ್ಯಚಟುವಟಿಕೆಗಳ ಸಂಚಾಲಕರಾಗಿದ್ದರು.

ವಿಶ್ವಪರ್ಯಟನೆ: ಈ ಕಾರ್ಯಕ್ರಮವನ್ನು ಪ್ರಪ್ರಥಮವಾಗಿ ಸ್ಕೌಟ್-ಗೈಡ್, ರೋವರ್-ರೇಂಜರ್‌ಗಳಿಗೆ ವಿದೇಶಿ ಪ್ರಯಾಣದ ವಿಸಾ (VISA), ವಿಶ್ವದ ವಿವಿಧ ದೇಶಗಳ ಸ್ಕೌಟ್-ಗೈಡ್ ಸಂಸ್ಥೆ ಮತ್ತು ಸಂಸ್ಕೃತಿಯ ಪರಿಚಯ ಮಾಡಿಕೊಡಲು ರಚಿಸಲಾಗಿತ್ತು. ಈ ಚಟುವಟಿಕೆಯನ್ನು ಶ್ರೀಮತಿ ಗೀತಾ ನಟರಾಜ್, ಎಲ್.ಟಿ(ಗೈ) ಮತ್ತು ರಾಜ್ಯ ಆಯುಕ್ತರು(ಗೈಡ್)ರವರು ಆಯೋಜಿಸಿದ್ದರು.

ದಿನಾಂಕ 19-01-2015ರಂದು ನಡೆದ ಪಥಸಂಚಲನವು ಶ್ರೀ ಕೋನಪ್ಪ ರೆಡ್ಡಿ, ಡಿ.ವೈ.ಎಸ್.ಪಿ., ದೊಡ್ಡಬಳ್ಳಾಪುರ, ಉಪವಿಭಾಗ, ಅವರಿಂದ ಉದ್ಘಾಟಿಸಲಾಯಿತು. ಆಕರ್ಷಣೀಯವಾದ ಪಥಸಂಚಲನವು ಸ್ಕೌಟ್/ಗೈಡ್‌ಗಳ ಘೋಷಣೆಗಳಿಂದ ಹಾಗೂ ಘೋಷಣಾ ಫಲಕಗಳಿಂದ ಸಾರ್ವಜನಿಕರಲ್ಲಿ ಹೊಸ ಸಂಚಲನೆಯನ್ನು ಮೂಡಿಸಿತು.

ಮಧ್ಯಾಹ್ನ ಸಾಹಸ ಕ್ರೀಡೆಗಳನ್ನು ಉದ್ಘಾಟಿಸಿ ಅದರಿಂದ ಆಕರ್ಷಿತರಾದ ಮಾನ್ಯ ಗೃಹ ಸಚಿವರಾದ ಶ್ರೀ ಕೆ.ಜೆ. ಜಾರ್ಜ್ ಹಾಗೂ ಶ್ರೀ ಟಿ. ವೆಂಕಟರಮಣಯ್ಯ, ಶಾಸಕರು, ದೊಡ್ಡಬಳ್ಳಾಪುರ, ಇವರು ಸಹ ಈ ಸಾಹಸ ಕ್ರೀಡೆಗಳಲ್ಲಿ ಪಾಲ್ಗೊಳ್ಳುವ ಮೂಲಕ ಉದ್ಘಾಟಿಸಿದರು.

ದಿನಾಂಕ 20-01-2015ರಂದು ಜಾಂಬೋರೇಟ್ ಅಂಗವಾಗಿ ಹಮ್ಮಿಕೊಂಡ ಹಿಮಾಲಯ ವೃಕ್ಷಮಣಿಧಾರಕರ ಸಭೆಯನ್ನು ಶ್ರೀ ಅನಲೇಂದ್ರ ಶರ್ಮ, ಪ್ರಾದೇಶಿಕ ಸಂಘಟನಾ ಆಯುಕ್ತರು(ಸ್ಕೌಟ್) ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು ಹಾಗೂ ಪ್ರತಿ ಜಿಲ್ಲೆಯ ಅತ್ಯುತ್ತಮ ದಳನಾಯಕ ಮತ್ತು ನಾಯಕಿಯರನ್ನು ಗುರುತಿಸಿ ಸನ್ಮಾನಿಸಲಾಯಿತು.

ಜಾಂಬೋರೇಟ್ ವೈವಿಧ್ಯಮಯವಾಗಿತ್ತು ನಮಗರಿವಿಲ್ಲದೆಯೇ ಅಂತಿಮ ಹಂತಕ್ಕೆ ಬಂದಿತ್ತು. 22-01-2015ರಂದು ಸಮಾರೋಪ ಸಮಾರಂಭಕ್ಕೆ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳು ಹಾಗು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯದ ಅಧ್ಯಕ್ಷರು ಆದ ಶ್ರೀಮಾನ್ ಸಿದ್ಧರಾಮಯ್ಯ ಆಗಮಿಸಿ ಅವರು ತಮ್ಮ ಸಮಾರೋಪ ಭಾಷಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಇನ್ನು ಹೆಚ್ಚಾಗಿ ವಿಸ್ತರಿಸಿಕೊಳ್ಳಲು ರಾಜ್ಯ ಸರ್ಕಾರ ಅಗತ್ಯ ನೆರವು ನೀಡುವುದಾಗಿ ಭರವಸೆಯಿತ್ತರು. ಈ ಚಳವಳಿಯಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ಪಾಲ್ಗೊಂಡು ಪಠ್ಯದ ಜೊತೆಗೆ ಪಠ್ಯೇತರ ಶಿಕ್ಷಣವಾದ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಬೇಕೆಂದು ಕರೆಯಿತ್ತರು. ಇದೇ ಸಂದರ್ಭದಲ್ಲಿ "ನಿಸರ್ಗ" ಜಾಂಬೋರೇಟ್‌ನ ವಿಶೇಷ ಸ್ಮರಣ ಸಂಚಿಕೆಯನ್ನು ಬಿಡುಗಡೆಗೊಳಿಸಿದರು. ಈ ಸ್ಮರಣ ಸಂಚಿಕೆಯು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಕುರಿತಂತೆ ಲೇಖನಗಳನ್ನು ಹಾಗೂ ಗಣ್ಯರ ಸಂದೇಶಗಳನ್ನು ಒಳಗೊಂಡಿದೆ. ಉನ್ನತ ಶಿಕ್ಷಣ ಸಚಿವ ಶ್ರೀ ಆರ್.ವಿ. ದೇಶಪಾಂಡೆ ಅವರು "ಕರ್ನಾಟಕ ದರ್ಶನ" ಕಾರ್ಯಕ್ರಮವನ್ನು ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳಿಗೂ ವಿಸ್ತರಿಸುವುದಾಗಿ ಭರವಸೆ ನೀಡಿದರು. ಈ ಹಿನ್ನೆಲೆಯಲ್ಲಿ ಈಗಾಗಲೇ 3500 ವಿದ್ಯಾರ್ಥಿಗಳಿಗೆ "ಕರ್ನಾಟಕ ದರ್ಶನ" ಕಾರ್ಯಕ್ರಮದಲ್ಲಿ ಭಾಗಿಯಾಗುವ ಅವಕಾಶ ನೀಡಲಾಗುವುದೆಂಬ ಭರವಸೆಯ ಪತ್ರ ಬಂದಿದೆ. ಇದಕ್ಕಾಗಿ ನಾವು ಉನ್ನತ ಶಿಕ್ಷಣ ಸಚಿವರಿಗೆ ಆಭಾರಿಯಾಗಿದ್ದೇವೆ. ಚಿಕ್ಕಬಳ್ಳಾಪುರದ ಸಂಸದರಾದ ಶ್ರೀ ವೀರಪ್ಪ ಮೋಯ್ಲಿಯವರು, ಮಾನ್ಯ ಲೋಕೋಪಯೋಗಿ ಸಚಿವರಾದ ಡಾ॥ ಹೆಚ್.ಎಸ್. ಮಹಾದೇವಪ್ಪನವರು, ಮಾನ್ಯ ಬೃಹತ್ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಕೇಂದ್ರ ಸಚಿವರಾದ ಶ್ರೀ ಜಿ.ಎಂ. ಸಿದ್ದೇಶ್ವರ, ಮಾನ್ಯ ವಿಧಾನಪರಿಷತ್ ಸದಸ್ಯರು ಮತ್ತು ಮಾಜಿ ಸಚಿವರಾದ ಶ್ರೀ ಬಸವರಾಜ ಹೊರಟ್ಟಿ, ಮಾನ್ಯ ಅಧ್ಯಕ್ಷರು, ಕರ್ನಾಟಕ ವಾಯುವಾಲಿನ್ಯ ನಿಯಂತ್ರಣ

ಮಂಡಳಿಯ ಶ್ರೀ ವಾಮನಾಚಾರ್ಯ, ರಾಜ್ಯ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಸಚಿವರಾದ ಶ್ರೀ ರೋಷನ್‌ಬೇಗ್‌ರವರು, ಕೃಷಿ ಸಚಿವರಾದ ಶ್ರೀ ಕೃಷ್ಣ ಬೈರೇಗೌಡರವರು, ಮಾಜಿ ರಾಜ್ಯ ಕೋಶಾಧಿಕಾರಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಶ್ರೀ ಟಿ. ಪ್ರಭಾಕರ್, ಸ್ಥಳೀಯ ಶಾಸಕರಾದ ಶ್ರೀ ವೆಂಕಟರಮಣಯ್ಯರವರು ಸೇರಿದಂತೆ ಸಭೆಯಲ್ಲಿ ಉಪಸ್ಥಿತರಿದ್ದ ಗಣ್ಯರು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳಿಗೆ ಬೆಂಬಲ ವ್ಯಕ್ತಪಡಿಸಿದರು.

ಸಂಸ್ಥೆಯ ಕೋಶಾಧಿಕಾರಿ ಶ್ರೀ. ಪ್ರಭುದೇವ ಜೆ. ಚಿಗಟೇರಿ, ಸಮಾರೋಪ ಸಮಾರಂಭಕ್ಕೆ ಆಗಮಿಸಿದ ಅತಿಥಿಗಳಿಗೆ ಸ್ವಾಗತ ಕೋರಿದರು. ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ. ಪಿ.ಜಿ.ಆರ್. ಸಿಂಧ್ಯರವರು ಜಾಂಬೋರೇಟ್ ಸಮಾವೇಶದ ಒಂದು ಪಕ್ಷಿನೋಟವನ್ನು ಸಭೆಯ ಮುಂದಿಟ್ಟರು. ಶ್ರೀ. ಆನಂದ ಅಡಿಗ, ಎಲ್.ಟಿ(ಸ್ಕೌ) ಜಾಂಬೋರೇಟ್ ಸ್ಕೌಟ್ ವಿಭಾಗದ ನಾಯಕರು, ಶ್ರೀಮತಿ ಉಷಾ ದಾಮೋದರನ್, ಎ.ಎಲ್.ಟಿ(ಗೈ) ಜಾಂಬೋರೇಟ್ ಗೈಡ್ ವಿಭಾಗದ ನಾಯಕಿಯವರು ಜಾಂಬೋರೇಟ್ ವರದಿಯನ್ನು ಪ್ರಸ್ತುತ ಪಡಿಸಿದರು ಇಬ್ಬರು ಸ್ಕೌಟ್ಸ್ ಹಾಗೂ ಇಬ್ಬರು ಗೈಡ್ಸ್ ಜಾಂಬೋರೇಟ್ ಜಾತ್ರೆಯಲ್ಲಿ ಆದ ಅನುಭವವನ್ನು ಹಂಚಿಕೊಂಡರು. ರಾಷ್ಟ್ರೀಯ ಮತ್ತು ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಉಪಾಧ್ಯಕ್ಷರಾದ ಶ್ರೀ. ಕೊಂಡಜ್ಜಿ ಬ. ಷಣ್ಮುಖಪ್ಪನವರು ವಂದನಾರ್ಪಣೆ ಸಲ್ಲಿಸಿದರು.

ಕಾರ್ಯಕ್ರಮಗಳಿಗಾಗಿ ಸುಂದರವಾದ ಬೃಹತ್ ವೇದಿಕೆಯನ್ನು ನಿರ್ಮಿಸಲಾಗಿತ್ತು. ಏಳು ದಿನಗಳವರೆಗೆ ನಡೆದ ಸಮಾವೇಶದಲ್ಲಿ ಸ್ಕೌಟ್/ಗೈಡ್/ರೋವರ್/ರೇಂಜರ್ ವಿದ್ಯಾರ್ಥಿಗಳು ಜಾಂಬೋರೇಟ್ ಜಾತ್ರೆಯ ಸಂತೋಷಕೂಟದಲ್ಲಿ ಸಂಭ್ರಮದಿಂದ ಭಾಗವಹಿಸಿದ್ದರು. 22-01-2015ರ ಭವ್ಯ ಶಿಬಿರಾಗ್ನಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ರಾಜ್ಯ ಸಚಿವರಾದ ಶ್ರೀ ಕಿಮ್ಮನೆ ರತ್ನಾಕರ್‌ರವರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ. ಬಿ.ಜಿ. ನಂದಕುಮಾರ್, ಭಾ.ಆ.ಸೇ. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಅವರು ಸಹ ಉಪಸ್ಥಿತರಿದ್ದರು.

ದಿನಾಂಕ 23-01-2015ರಂದು ಬೆಳಗ್ಗೆ ಸರ್ವಧರ್ಮಪ್ರಾರ್ಥನೆಯೂ ಯಶಸ್ವಿಯಾಗಿ ನಡೆಯಿತು. ಈ ಕಾರ್ಯಕ್ರಮದಲ್ಲಿ ಪೂಜ್ಯ ಶ್ರೀ. ಶಿವರುದ್ರಸ್ವಾಮಿಗಳು, ಶ್ರೀ ಬೇಲಿಮಠ ಮಹಾಸಂಸ್ಥಾನ, ಬೆಂಗಳೂರು, ರೆವರೆಂಡ್ ವೇದಮೂರ್ತಿ ಪಾದ್ರಿಗಳು, ದೊಡ್ಡಬಳ್ಳಾಪುರ ಚರ್ಚ್ ಮತ್ತು ಶ್ರೀ ಹೆಚ್. ಮುನಾಫ್, ಕಿಲಾ ಜಾಮಿಯಾ ಮಸೀದಿ, ದೊಡ್ಡಬಳ್ಳಾಪುರ ಅವರುಗಳು ಭಾಗವಹಿಸಿ, ಎಲ್ಲ ಧರ್ಮಗಳೂ ಶಾಂತಿತತ್ವಗಳ ಸಂದೇಶವನ್ನೇ ಸಾರುವುದೆಂದು ಸ್ಪಷ್ಟೀಕರಿಸಿದರು.

ಈ ಜಾಂಬೋರೇಟ್ ಸಮಾವೇಶವು ಅತ್ಯುತ್ತಮ ಶುಭಾರಂಭವಾಗಿ ನಿಗದಿತ ಕಾರ್ಯಚಟುವಟಿಕೆಗಳನ್ನು ಪೂರ್ಣಗೊಳಿಸಿ ಯಶಸ್ವಿಯಾಗಿ ಉದಾತ್ತವಾದ ಧ್ಯೇಯ, ನೆಲ-ಜಲ-ರಕ್ಷಣೆ, ಭ್ರಾತೃತ್ವ ಮತ್ತು ಶಾಂತಿ ಸಂದೇಶದೊಂದಿಗೆ ಮುಕ್ತಾಯವಾಯಿತು. ಇದರೊಂದಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಸಂಸ್ಥಾಪಕ ಶ್ರೀ ಬೇಡನ್ ಪೊವೆಲ್ ಅವರ ಸದಾಶಯಗಳನ್ನು ಸಮುದಾಯದಲ್ಲಿ ಪ್ರಸಾರ ಮಾಡುವಲ್ಲಿ ಯಶಸ್ವಿಯಾಯಿತು.

ಸತತವಾಗಿ ಜಾಂಬೋರೇಟ್‌ನ ಯಶಸ್ವಿಗಾಗಿ ಶ್ರಮಿಸಿದ ಸರ್ಕಾರದ ಗ್ರಾಮಾಂತರ, ಜಿಲ್ಲಾ ಹಾಗೂ ರಾಜ್ಯ ಮಟ್ಟದ ವಿವಿಧ ಇಲಾಖೆಗಳ ಸಹಕಾರಕ್ಕೆ ಜಿಲ್ಲಾ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಿಗೆ ಜಾಂಬೋರೇಟ್ ಸಮಿತಿ ಸದಸ್ಯರಿಗೆ, ಹಿತೈಷಿಗಳಿಗೆ, ದಾನಿಗಳಿಗೆ, ಸಂದರ್ಶಕರಿಗೆ ಮಾಧ್ಯಮ ಮಿತ್ರರಿಗೆ ಹೃನ್ಮಃಪೂರ್ವಕವಾಗಿ ವಂದಿಸುತ್ತಾ ಅಭಿನಂದಿಸುತ್ತೇವೆ. ಹಾಗು ಜಾಂಬೋರೇಟ್ ಸಂಯೋಜಕರಾದ ಶ್ರೀ ಚಿನ್ನಸ್ವಾಮಿ ರೆಡ್ಡಿ, ಎಲ್.ಟಿ(ಸ್ಕೌ) ಮತ್ತು ರಾಜ್ಯ ಜಂಟಿ ಕಾರ್ಯದರ್ಶಿ(ಸ್ಕೌ) ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್, ಎಲ್.ಟಿ(ಗೈ) ಮತ್ತು ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು(ಗೈ) ಇವರೆಲ್ಲರಿಗೆ ಅಭಿನಂದನೆ ಸಲ್ಲಿಸುತ್ತೇವೆ.

ಈ 27ನೇ ಜಾಂಬೋರೇಟ್ ಸಂಭ್ರಮದಿಂದ ಯಶಸ್ವಿಯಾಗಿ ನಡೆಯಲು ವಿಶೇಷವಾಗಿ ಸಹಕರಿಸಿದ ಶ್ರೀ ಟಿ. ವೆಂಕಟರಮಣಯ್ಯ, ಸ್ಥಳೀಯ ಶಾಸಕರು, ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್, ಗ್ರಾಮ ಪಂಚಾಯತಿಗಳಿಗೆ, BESCOM, BWSSB, ಪೊಲೀಸ್ ಇಲಾಖೆ, ಲೋಕೋಪಯೋಗಿ ಇಲಾಖೆ, ಕರ್ನಾಟಕ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮತ್ತು ಕರ್ನಾಟಕ ಸರ್ಕಾರಕ್ಕೆ ನಾವು ಚಿರಋಣಿಗಳು.

**ಸ್ಕೌಟಿಂಗ್-ಗೈಡಿಂಗ್ ಚಿರಾಯುವಾಗಲಿ.**

## ರಾಜ್ಯಮಟ್ಟದ "ಇಂಡಬಾ" (ಸ್ಕೌಟರ್ಸ್ ಸಮಾವೇಶ)

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ಚಾಮರಾಜನಗರ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ದಿನಾಂಕ : 29, 30 ಮತ್ತು 31ನೇ ಡಿಸೆಂಬರ್ 2014 ರ ವರೆಗೆ ರಾಜ್ಯಮಟ್ಟದ ಇಂಡಬಾ (ಸ್ಕೌಟರ್ಸ್‌ಗಳ ಸಮಾವೇಶ) ವನ್ನು ಕೊಳ್ಳೆಗಾಲದ ಶ್ರೀ ರಾಜರಾಜೇಶ್ವರಿ ಕಲ್ಯಾಣ ಮಂದಿರದಲ್ಲಿ ಏರ್ಪಡಿಸಲಾಗಿತ್ತು.

ಈ ಸಮಾವೇಶದಲ್ಲಿ ರಾಜ್ಯದಾದ್ಯಂತ 24 ಜಿಲ್ಲೆಗಳಿಂದ ಒಟ್ಟು 153 ಸ್ಕೌಟರ್ಸ್‌ಗಳು 7 ಶಿಬಿರದ ಸಿಬ್ಬಂದಿ ವರ್ಗ ಹಾಗೂ 10 ಸೇವಾ ಸ್ಕೌಟ್ಸ್‌ಗಳು ಸೇರಿ ಒಟ್ಟು 170 ಮಂದಿ ಭಾಗವಹಿಸಿದ್ದರು. ಶಿಬಿರದ ಉದ್ಘಾಟನಾ ಸಮಾರಂಭವು ದಿನಾಂಕ 29-12-2014 ರಂದು ಶ್ರೀ ಜಿ.ಆರ್. ಅಶ್ವತ್ಥನಾರಾಯಣ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ಉಪಾಧ್ಯಕ್ಷರು, ರಾಜ್ಯ ಹಾಗೂ ರಾಷ್ಟ್ರೀಯ ಸಂಸ್ಥೆ ಇವರು ಸಮಾವೇಶವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಾ ಉತ್ತಮ ವ್ಯಕ್ತಿಗಳಾಗಿ ರೂಪುಗೊಳ್ಳಲು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉತ್ತಮ ಸಂಸ್ಥೆಯಾಗಿದೆ ಎಂದು ನುಡಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ಆಯುಕ್ತರಾದ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಮಾತನಾಡುತ್ತ ಸ್ವಾತಂತ್ರ್ಯಾನಂತರ ದೇಶದಲ್ಲಿ ಸಾಕಷ್ಟು ಪ್ರಗತಿ ಕಂಡಿದ್ದರೂ ನೆಮ್ಮದಿ ಇಲ್ಲದೇ ಬದುಕುವ ನೀತಿ ನಿರ್ಮಾಣವಾಗಿದೆ. ಸ್ಕೌಟ್ಸ್-ಗೈಡ್ಸ್ ಶಿಸ್ತು ಸಂಯಮದ ನಡತೆಯನ್ನು ಕಲಿಸುವುದರಿಂದ ಇದರಲ್ಲಿ ಮಕ್ಕಳನ್ನು ಹೆಚ್ಚಾಗಿ ತೊಡಗಿಸಿಕೊಳ್ಳಬೇಕಾದ ಅಗತ್ಯವಿದೆ. ಪ್ರಸ್ತುತ ರಾಜ್ಯದಲ್ಲಿ 3.50 ಲಕ್ಷ ಸ್ಕೌಟ್ಸ್-ಗೈಡ್ಸ್‌ಗಳಿದ್ದು ಇದನ್ನು 10 ಲಕ್ಷಕ್ಕೆ ಹೆಚ್ಚಿಸುವ ಗುರಿ ಹೊಂದಲಾಗಿದೆ ಎಂದು ತಿಳಿಸಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ಜಿಲ್ಲಾ ಸಂಸ್ಥೆ ಚಾಮರಾಜನಗರದ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿ ರವರು ಮಾತನಾಡುತ್ತಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯಮಟ್ಟದ ಸಮಾವೇಶವು ಜಿಲ್ಲೆಯಲ್ಲಿ ನಡೆಯುತ್ತಿರುವುದು ಹೆಮ್ಮೆಯ ಸಂಗತಿಯಾಗಿದ್ದು ಸ್ಕೌಟ್ ಸಂಸ್ಥೆಯು ಉತ್ತಮ ನಡವಳಿಕೆ ಮತ್ತು ಮಾರ್ಗದರ್ಶನ ನೀಡುವ ಸಂಸ್ಥೆಯಾಗಿದೆ ಎಂದರು. ಶ್ರೀ ಜಿ.ಆರ್. ಅಶ್ವತ್ಥನಾರಾಯಣ ಜಿಲ್ಲಾ ಮುಖ್ಯ ಆಯುಕ್ತರು ಸ್ಕೌಟ್ ಸಂಸ್ಥೆಯ ಬಗ್ಗೆ ಪ್ರಶಂಶಿಸಿ ಸಂಸ್ಥೆಯು ಸ್ಕೌಟ್ಸ್-ಗೈಡ್ಸ್ ಗಳಿಗೆ ಉತ್ತಮ ಶಿಸ್ತು, ದೇಶಾಭಿಮಾನ ಉತ್ತಮ ನಡತೆಯನ್ನು ಕಲಿಸುತ್ತಿದ್ದು ನಾಯಕತ್ವ ಕೌಶಲ್ಯಗಳನ್ನು ವಿವಿಧ ಶಿಬಿರಗಳನ್ನು ಆಯೋಜಿಸಿ ಕಲಿಸಲಾಗುತ್ತಿದೆ ಎಂದರು. ಸಮಾರಂಭದಲ್ಲಿ ವಿ.ಎಂ. ರಾಮಚಂದ್ರ, ಎಲ್.ಟಿ.(ಸ್ಕೌ) ಶ್ರೀ ಷರಾಫ್ ಮಾದಪ್ಪ, ಬರ್ನಾಡೆಟ್ ಲೆವಿಸ್, ಜಿಲ್ಲಾ ಆಯುಕ್ತರು (ಗೈಡ್ಸ್) ಮಾಜಿ ಪುರಸಭಾ ಅಧ್ಯಕ್ಷರಾದ ಶ್ರೀ ಚಂದ್ರಶೇಖರಯ್ಯ, ಶ್ರೀ ಪಾಂಡುರಂಗ ನಾಗರಾಜು, ಶ್ರೀ ಲೋಕೇಶ್ ಎಸ್.ಟಿ.ಸಿ.,(ಸ್ಕೌಟ್) ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಮಹದೇವಸ್ವಾಮಿ, ಸರ್ವರನ್ನು ವಂದಿಸಿದರು. ಶ್ರೀ ಮಲ್ಲಿಕಾರ್ಜುನ ಸ್ವಾಮಿ ಸ್ವಾಗತಿಸಿದರು. ಶ್ರೀ ಎಲ್.ಟಿ. ಲೋಕೇಶ್ ಕಾರ್ಯಕ್ರಮ ನಿರೂಪಿಸಿದರು.

ದಿನಾಂಕ 30-01-2014 ರಂದು ಸಮಾರೋಪ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀಯುತ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಜಂಟಿ ಕಾರ್ಯದರ್ಶಿಗಳು (ಸ್ಕೌಟ್) ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮುಖ್ಯ

ಅತಿಥಿಯಾಗಿ ಮಾತನಾಡುತ್ತಾ ನಾವು ಉತ್ತಮ ಸ್ಕೌಟರ್ಸ್ ಆಗಿ ಸಮಾಜ ಹಾಗು ಸಮುದಾಯ ಗುರುತಿಸುವ ಕೆಲಸವನ್ನು ಮಾಡಬೇಕು. ಮತ್ತು ಸಮಾಜದಲ್ಲಿ ಉತ್ತಮ ಕೆಲಸವನ್ನು ಮಾಡಿದಾಗ ಸಮಾಜಕ್ಕೆ ನಾವು ಹತ್ತಿರದವರಾಗುತ್ತೇವೆ ಎಂದು ನುಡಿದರು. ಸಮಾವೇಶದಲ್ಲಿ ಶ್ರೀ ಕೆ.ಜಿ. ಗೋಪಾಲಕೃಷ್ಣ, ಶ್ರೀ ಬಾಲಕೃಷ್ಣ, ಶ್ರೀ ಷರಾಫ್ ಮಾದಪ್ಪ, ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಶ್ರೀ ವಿ.ಎಂ. ರಾಮಚಂದ್ರ ರವರು ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸಿದರು.

ದಿನಾಂಕ 31–01–2014 ರಂದು ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು. ಸಮಾವೇಶ ಮುಗಿದ ನಂತರ ಶ್ರೀ ಮಲಯ ಮಹದೇಶ್ವರ ಬೆಟ್ಟ, ಸೋಮೇಶ್ವರ ದೇವಾಲಯ ಹಾಗೂ ಗಗನಚುಕ್ಕಿ – ಭರಚುಕ್ಕಿ, ಆದಿ ರಂಗನಾಥ, ಮುಂತಾದ ಸ್ಥಳಗಳಿಗೆ ಪ್ರವಾಸ ಏರ್ಪಡಿಸಲಾಗಿತ್ತು.

## ರಾಜ್ಯಮಟ್ಟದ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ

ರಾಜ್ಯಮಟ್ಟದ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿ ಶಿಬಿರವನ್ನು ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರದಲ್ಲಿ ದಿನಾಂಕ 06–01–2015 ರಿಂದ 13–01–2015 ರ ವರೆಗೆ ಏರ್ಪಡಿಸಲಾಗಿತ್ತು.

ಈ ಶಿಬಿರದ ನಾಯಕರಾಗಿ ಶ್ರಿ ಚಿನ್ನಸ್ವಾಮಿ ರೆಡ್ಡಿ ಎಲ್.ಟಿ., (ಸ್ಕೌಟ್) ನಿರ್ವಹಿಸಿದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಕೆ.ಜಿ. ಗೋಪಾಲಕೃಷ್ಣ ಎಲ್.ಟಿ. (ಸ್ಕೌಟ್) ಶ್ರೀ ಸಿ.ಎನ್. ಮಹೇಶ್, ಎಲ್.ಟಿ. (ಸ್ಕೌಟ್), ಶ್ರೀ ಜಗದೀಶ್ ಬೋಳಸುರ, ಎಲ್.ಟಿ. (ಸ್ಕೌಟ್) ಶ್ರೀ ಬಿ.ಕೆ. ಪಾಟೀಲ್, ಎಲ್.ಟಿ. (ಸ್ಕೌಟ್) ಶ್ರೀ ಎಲ್.ಟಿ. ಲೋಕೇಶ್ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಮತ್ತು ಶ್ರೀ ಶರಾಫ್ ಮಾದಪ್ಪ ಎಲ್.ಟಿ. (ಸ್ಕೌಟ್)ರವರು ಕಾರ್ಯ ನಿರ್ವಹಿಸಿದರು. ರಾಜ್ಯಾದ್ಯಂತ 32 ಶಿಬಿರಾರ್ಥಿಗಳು ವಿವಿಧ ಜಿಲ್ಲೆಗಳಿಂದ ಭಾಗವಹಿಸಿದ್ದರು.

ದಿನಾಂಕ 10–01–2015 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳನ್ನು ಕುರಿತು ಮಾತನಾಡಿ ಶಿಬಿರಾರ್ಥಿಗಳು ಮಾಡಿದ ಪಯೋನಿಯರಿಂಗ್ ಪ್ರಾಜೆಕ್ಟ್‌ಗಳನ್ನು ವೀಕ್ಷಿಸಿ, ಪ್ರಶಂಸೆ ವ್ಯಕ್ತಪಡಿಸಿ ಮಾತನಾಡುತ್ತಾ ಈ ತರಬೇತಿಯು ಉನ್ನತ ತರಬೇತಿಯಾಗಿದ್ದು ಉತ್ತಮ ನಾಯಕರಿಂದ ತರಬೇತಿಯನ್ನು ನೀಡಲಾಗುತ್ತಿದ್ದು ತರಬೇತಿಯಿಂದ ಕಲಿತ ವಿಷಯಗಳನ್ನು ತಮ್ಮ ತಮ್ಮ ಶಾಲೆಗಳ ಮಕ್ಕಳಿಗೆ ಕಲಿಸಿ ಉತ್ತಮ ನಾಯಕತ್ವವನ್ನು, ಶಿಸ್ತು ಸೇವಾ ಭಾವನೆಯನ್ನು ಬೆಳೆಸಲು ಮತ್ತು ಶಾಲೆಗಳಲ್ಲಿ ಸಕ್ರಿಯವಾಗಿ ಸ್ಕೌಟ್ ತಂಡಗಳನ್ನು ನಡೆಸುವಂತೆ ತಿಳಿಸಿದರು. ಸಮಾರಂಭದಲ್ಲಿ ಆಜೀವ ಸದಸ್ಯರಾದ ಶ್ರೀ ಮೋಹನ್ ಕೊಂಡಜ್ಜಿರವರು ಸಹಾ ಉಪಸ್ಥಿತರಿದ್ದರು ಶಿಬಿರದ ಚಟುವಟಿಕೆಗಳನ್ನು ಕುರಿತು ಪ್ರಶಂಶಿಸಿದರು.

ದಿನಾಂಕ 09–01–2015 ರಂದು ಬನ್ನಿಮಂಗಲ ಶ್ರೀ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಹೊರಸಂಚಾರ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ದಿನಾಂಕ 13–01–2015 ರಂದು ಸರ್ವಧರ್ಮ ಸಮನ್ವಯ ಪ್ರಾರ್ಥನೆ ಕಾರ್ಯಕ್ರವನ್ನು ಏರ್ಪಡಿಸಲಾಗಿತ್ತು.

# ರಾಜ್ಯ ಮಟ್ಟದ "ಯುವ ವೇದಿಕೆ"

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಆಶ್ರಯದಲ್ಲಿ "ರಾಜ್ಯ ಮಟ್ಟದ ಯುವ ವೇದಿಕೆ"ಯನ್ನು ದಿನಾಂಕ:28.01.2015ರಿಂದ 01.02.2015ರವರೆಗೆ ಜಿಲ್ಲಾ ಸ್ಕೌಟ್ ಭವನ, ಹಾಸನದಲ್ಲಿ ಆಯೋಜಿಸಲಾಗಿದ್ದು, ಈ ಯುವವೇದಿಕೆಗೆ ರಾಜ್ಯಾದ್ಯಂತ 14 ಜಿಲ್ಲೆಗಳಿಂದ 93 ರೋವರ್ಸ್‌ಗಳು ಮತ್ತು 10 ಜಿಲ್ಲೆಗಳಿಂದ 67 ರೇಂಜರ್ಸ್‌ಗಳು ಭಾಗವಹಿಸಿದ್ದರು.

ರೋವರ್ಸ್ ವಿಭಾಗದ ನಾಯಕರಾಗಿ ಶ್ರೀ ಎ.ವಿ.ರಾಜೇಶ್, ರೋವರ್ ಸ್ಕೌಟ್ ನಾಯಕ, ಶಿವಮೊಗ್ಗ ಮತ್ತು ರೇಂಜರ್ ವಿಭಾಗದ ನಾಯಕರಾಗಿ ಶ್ರೀಮತಿ ಅಂಜುಳಾ.ಜಿ., ದೊಡ್ಡಬಳ್ಳಾಪುರ ಇವರು ಸೇವೆಸಲ್ಲಿಸಿದರು. ಶ್ರೀ ಎಲ್.ಟಿ.ಲೋಕೇಶ್, ಎಲ್.ಟಿ.(ಸಿ), ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀ ಡಿ.ಬಾಲಕೃಷ್ಣ, ರೋವರ್ ಸ್ಕೌಟ್ ಲೀಡರ್, ಶ್ರೀ ಗಿರೀಶ್, ಶ್ರೀ ಜಯಣ್ಣ, ರೋವರ್ ಸ್ಕೌಟ್ ಲೀಡರ್, ಶ್ರೀ ಉಪೇಂದ್ರ, (ಆಹಾರ ವಿಭಾಗ), ಶ್ರೀಮತಿ ಎನ್.ಕೆ.ಛಾಯ, ಎಲ್‌ಟಿ(ಆರ್), ಶ್ರೀಮತಿ ಕಾಂಚನಮಾಲಾ, ಇವರು ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಶ್ರೀ ಟಿ.ಎ. ಮಂಜುನಾಥಾಚಾರ್, ಎಲ್‌ಟಿ(ಎಸ್), ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಮತ್ತು ಶ್ರೀಮತಿ ಸಿ. ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್)ರವರ ಪೂರ್ಣ ಮಾರ್ಗದರ್ಶನದಲ್ಲಿ ಯುವವೇದಿಕೆಯು ನಡೆಯಿತು.

ದಿನಾಂಕ: 28.01.2015ರಂದು ರೋವರ್ ವಿಭಾಗದಲ್ಲಿ 9 ಗುಂಪುಗಳಾಗಿ ರೇಂಜರ್ ವಿಭಾಗದಲ್ಲಿ 8 ಗುಂಪುಗಳಾಗಿ ವಿಭಾಗಿಸಲಾಯಿತು. ಧ್ವಜಾರೋಹಣದೊಂದಿಗೆ ಶಿಬಿರವು ಪ್ರಾರಂಭವಾಯಿತು.

ಸ್ಕೌಟ್-ಗೈಡ್ ಇತಿಹಾಸ, ಪ್ರಾರ್ಥನೆ ಮತ್ತು ಧ್ವಜಗೀತೆ, ಗುರುತು, ವಂದನೆ, ಎಡಗೈ ಹಸ್ತಲಾಘನ, ವಂದನೆ, ರೋವರ್ ಮತ್ತು ರೇಂಜರ್‌ಗಳ ಪ್ರಗತಿಪರ ತರಬೇತಿ, ಧ್ವಜಗಳ ಬಗ್ಗೆ ಮಾಹಿತಿ, ಸಮವಸ್ತ್ರ, ಎಂಬ ವಿಷಯಗಳನ್ನು ಶಿಬಿರದ ನಾಯಕರು ಹಾಗೂ ಸಹಾಯಕ ಸಿಬ್ಬಂದಿಯವರು ಶಿಬಿರದ ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಸವಿಸ್ತಾರವಾಗಿ ತಿಳಿಸಲಾಯಿತು.

ದಿನಾಂಕ : 29.01.2015ರಂದು ಯುವ ವೇದಿಕೆಯ ಉದ್ಘಾಟನಾ ಸಮಾರಂಭವನ್ನು ನೆರವೇರಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ॥ ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಸಂಸ್ಥೆ, ಹಾಸನ, ಇವರು ವಹಿಸಿದ್ದು, ಮುಖ್ಯ ಅತಿಥಿಗಳಾಗಿ ಶ್ರೀ ಹೆಚ್.ಎಸ್.ಪ್ರಕಾಶ್, ವಿಧಾನ ಸಭಾ ಸದಸ್ಯರು, ಹಾಸನ ರವರು ದೀಪ ಬೆಳಗುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಆಯುಕ್ತರು(ಸ್ಕೌಟ್ಸ್), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಎಸ್.ಕೆ. ಪ್ರಭಾ ರಾ.ಜಂ.ಕಾ., ಶ್ರೀ ಮುತ್ತೇಗೌಡ, ಜಿಲ್ಲಾ ಕಾರ್ಯದರ್ಶಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಹಾಸನ, ಶ್ರೀಮತಿ ಜಯರಮೇಶ್, ಆಯುಕ್ತರು (ಗೈಡ್ಸ್) ಶ್ರೀ ಸಿದ್ದೇಶ್‌ಕುಮಾರ್, ಜಿಲ್ಲಾ ಖಜಾಂಚಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಹಾಸನ, ಇವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಊಟ ಮುಗಿದ ನಂತರ ಯುವ ಧ್ವನಿ ಎಂಬ ಚಟುವಟಿಕೆಯನ್ನು ಶ್ರೀಮತಿ ಎಸ್.ಕೆ. ಪ್ರಭಾ, ಜಂಟಿ ರಾಜ್ಯ ಕಾರ್ಯದರ್ಶಿರವರು ನಡೆಸಿಕೊಟ್ಟರು. ಇದರಲ್ಲಿ ರೋವರ್ಸ್ ಮತ್ತು ರೇಂಜರ್ಸ್‌ಗಳು ಸೃಜನಶೀಲ ವಿಚಾರಗಳನ್ನು ವ್ಯಕ್ತಪಡಿಸಲು ಸಹಕಾರಿಯಾಗಿರುತ್ತದೆ ಎಂದು ತಿಳಿಸಿದರು.

ದಿನಾಂಕ : 30.01.2015ರಂದು ಬೆಳಿಗ್ಗೆ 6.30ಕ್ಕೆ ಶ್ರೀ ಸುರೇಶ್ ಗುರೂಜಿರವರಿಂದ ಯೋಗ ಮತ್ತು ಪ್ರಾಣಾಯಾಮ ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ನಂತರ ಯುವಜನತೆ ಮತ್ತು ಸಮುದಾಯ ವಿಷಯದ ಕುರಿತು ಶ್ರೀಯುತ ಜೆ.ಡಿ.ನಾರಾಯಣ, ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಡುವಲುಪ್ಪಿ ಇವರಿಂದ ಉಪನ್ಯಾಸ ಕಾರ್ಯಕ್ರಮ ಜರುಗಿತು. ಸಾಮಾಜಿಕ ಜಾಲತಾಣಗಳು ಯುವಜನತೆಯ ಬೆಳವಣಿಗೆಗೆ ಪೂರಕವೋ / ಮಾರಕವೋ ಎಂಬ ವಿಷಯದ ಕುರಿತು ಗುಂಪು ಚರ್ಚೆಯನ್ನು ಆಯೋಜಿಸಲಾಗಿತ್ತು. ಮಧ್ಯಾಹ್ನದ ಊಟ ಮುಗಿದ ಮೇಲೆ ನಾಯಕತ್ವದ ಗುಣಗಳು ಮತ್ತು ವ್ಯಕ್ತಿತ್ವ ವಿಕಸನ ವಿಷಯವನ್ನು ಕುರಿತು ಪ್ರೊ॥ ಶಿವಪ್ರಸಾದ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಾಸನ ಇವರಿಂದ ಉಪನ್ಯಾಸ ಕಾರ್ಯಕ್ರಮವನ್ನು ನೆರವೇರಿಸಲಾಗಿತ್ತು. ನಂತರ ರೋವರ್ಸ್ & ರೇಂಜರ್ಸ್‌ಗಳಿಗೆ ಕವಾಯಿತು ಅಭ್ಯಾಸ ಮಾಡಿಸಲಾಯಿತು, ಶಿಬಿರಾಗ್ನಿಯಲ್ಲಿ ಪ್ರತಿ ಜಿಲ್ಲೆಯ ವಿಶೇಷತೆ, ಸಂಸ್ಕೃತಿಯನ್ನು ಪ್ರತಿಬಿಂಬಿಸುವ ನೃತ್ಯ, ಗೀತೆ, ನಾಟಕಗಳನ್ನು ರೋವರ್ಸ್ ಮತ್ತು ರೇಂಜರ್ಸ್‌ಗಳು ಪ್ರದರ್ಶಿಸಿದ್ದು ಶಿಬಿರಾಗ್ನಿಯನ್ನು ಯಶಸ್ವಿಗೊಳಿಸಿದರು.

ದಿನಾಂಕ 31.01.2015 ರಂದು ಬೆಳಿಗ್ಗೆ 6.30ಕ್ಕೆ ಸ್ವಚ್ಛತಾ ಆಂದೋಲನಾ ಕಾರ್ಯಕ್ರಮವನ್ನು ಹಾಸನದ ಆಕಾಶವಾಣಿ ಕೇಂದ್ರದಲ್ಲಿ ಹಮ್ಮಿಕೊಂಡಿದ್ದು ಜಾಥಾ ಹೋಗುವುದರ ಮೂಲಕ ಎಲ್ಲಾ ರೋವರ್ಸ್ ಮತ್ತು ರೇಂಜರ್ಸ್‌ಗಳು ಸ್ವಚ್ಛತೆ ಬಗ್ಗೆ ಜಾಗೃತಿಯನ್ನು ಮೂಡಿಸುವಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದು ಯಶಸ್ವಿಯಾಗಿರುತ್ತದೆ. ಧ್ವಜಾರೋಹಣ ಕಾರ್ಯಕ್ರಮದ ನಂತರ, ಉಪಹಾರ ಮುಗಿಸಿ Transaction Analysis ವಿಷಯದ ಕುರಿತು ರೋವರ್ಸ್ ಲೀಡರ್‌ರಾದ ರಾಜೇಶ್‌ರವರು ಉಪನ್ಯಾಸ ನೀಡಿದರು. ನಂತರ Messengers of Peace ಸ್ವರೂಪ ಹಾಗೂ ಮಹತ್ವವನ್ನು ರೋವರ್ಸ್ – ರೇಂಜರ್ಸ್‌ಗಳಿಗೆ ತಿಳಿಸಿಕೊಡಲಾಯಿತು. ಹಾಗೆಯೇ HAM Radio of Demonstration ಕಾರ್ಯಾಗಾರವನ್ನು ಆಯೋಜಿಸಿದ್ದು, ನಂತರ ಮೂಲಭೂತ ಗಂಟುಗಳನ್ನು ಎಲ್ಲಾ ರೋವರ್ಸ್ ರೇಂಜರ್ಸ್‌ಗಳಿಗೆ ಕಲಿಸಲಾಯಿತು. ನಂತರ Dream Ride show and Experience Discussion ಉಪನ್ಯಾಸವನ್ನು ಶ್ರೀ ದೀಪಕ್ ತಿಮ್ಮೋಜಿ, ಶಿವಮೊಗ್ಗ, ಇವರು ನೆರವೇರಿಸಿದರು. ರಾತ್ರಿಯ ಶಿಬಿರಾಗ್ನಿಯಲ್ಲಿ ಸಾಂಸ್ಕೃತಿಕ ವೈವಿಧ್ಯತೆಯ ನೃತ್ಯ, ನಾಟಕ, ಗೀತಗಾಯನಗಳನ್ನು ರೋವರ್ಸ್ ಮತ್ತು ರೇಂಜರ್ಸ್‌ಗಳು ಪ್ರದರ್ಶಿಸಿದರು. ಕೊನೆಯ ದಿನವಾದ 01.02.2015ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಉಪಹಾರದ ನಂತರ ಸ್ಕೌಟ್ ಸಂಸ್ಥೆಯ ಉದ್ದೇಶ ಗುರಿ ತತ್ವಗಳ ಬಗ್ಗೆ ಮತ್ತು ಗೈಡ್ ಎಂಬ ವಿಷಯವನ್ನು ಕುರಿತು ಉಪನ್ಯಾಸವನ್ನು ನೀಡಲಾಯಿತು. ನಂತರ ನಡೆದ ಸಮಾರೋಪ ಕಾರ್ಯಕ್ರಮದಲ್ಲಿ ಶ್ರೀ ಪ್ರಕಾಶ್ ಎಸ್.ಯಾಜಿ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಯುವ ವೇದಿಕೆಯ ಎಲ್ಲಾ ನಾಯಕರು, ಪದಾಧಿಕಾರಿಗಳು ಉಪಸ್ಥಿತರಿದ್ದು, ರೋವರ್ಸ್ ಪ್ರತಿನಿಧಿ ಹಾಗೂ ರೇಂಜರ್ಸ್ ಪ್ರತಿನಿಧಿಗಳು ಈ ಯುವವೇದಿಕೆಯ ಅನುಭವಗಳ ಬಗ್ಗೆ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು. ಅಧ್ಯಕ್ಷತೆಯನ್ನು ಶ್ರೀ ಡಾ॥ವೈ.ಎಸ್.ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು.

## 37ನೇ ರಾಜ್ಯ ಮಟ್ಟದ ಕಬ್–ಬುಲ್‌ಬುಲ್ ಉತ್ಸವ

ಸಾರ್ವಜನಿಕ ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ದಕ್ಷಿಣ ಕನ್ನಡ, ಮಂಗಳೂರು, ಸ್ಥಳೀಯ ಸಂಸ್ಥೆ ಉಳ್ಳಾಲ ಮತ್ತು ಸಂತ ಜೋಸೆಫರ ಜೋಯ್‌ಲ್ಯಾಂಡ್ ಆಂಗ್ಲ ಮಾಧ್ಯಮಿಕ ಶಾಲೆ, ಕೊಲ್ಯ, ಸೋಮೇಶ್ವರ ಇವರ ಸಂಯುಕ್ತ ಆಶ್ರಯದಲ್ಲಿ 37ನೇ ರಾಜ್ಯ ಮಟ್ಟದ ಕಬ್–ಬುಲ್‌ಬುಲ್ ಉತ್ಸವವು ಸಂತ ಜೋಸೆಫರ ಜೋಯ್ ಲ್ಯಾಂಡ್ ಆಂಗ್ಲ ಮಾಧ್ಯಮ ಶಾಲೆ, ಕೊಲ್ಯ–ಸೋಮೇಶ್ವರ ಇಲ್ಲಿ 31.12.2014 ರಿಂದ 04–01–2015 ರ ವರೆಗೆ ಹಮ್ಮಿಕೊಳ್ಳಲಾಗಿತ್ತು.

ಒಟ್ಟು 22 ಜಿಲ್ಲೆಗಳಿಂದ 232 ಕಬ್‌ಗಳು, 38 ಕಬ್ ಮಾಸ್ಟರ್ಸ್, 205 ಬುಲ್‌-ಬುಲ್ಸ್ ಹಾಗೂ 32 ಫ್ಲಾಕ್ ಲೀಡರ್ಸ್ ಈ ಉತ್ಸವದಲ್ಲಿ ಪಾಲ್ಗೊಳ್ಳಲು ಆಗಮಿಸಿದ್ದರು. ವಿವಿಧ ಜಿಲ್ಲೆಗಳಿಂದ ಆಗಮಿಸಿದ ಮರಿಗಳನ್ನು 4 ಗುಂಪುಗಳನ್ನಾಗಿ ವಿಂಗಡಿಸಿ, ಆ ಗುಂಪುಗಳಿಗೆ ಕಾಶಿನಾಥ, ವೆಂಕಟಕೃಷ್ಣಪ್ಪ, ರಾಮಸ್ವಾಮಿ ಮತ್ತು ಆದಿಕೇಶವಲು ತಂಡ ಎಂದು ಹೆಸರಿಸಲಾಯಿತು.

ಉದ್ಘಾಟನಾ ಸಮಾರಂಭದಲ್ಲಿ ವೇದಿಕೆಯನ್ನು ಶ್ರೀಮತಿ ಗಿರಿಜಾಬಾಯಿ, ಅಧ್ಯಕ್ಷರು, ಉಳ್ಳಾಲ ಪುರಸಭೆ, ಶ್ರೀ ಸತೀಶ್ ಕುಂಪಲ, ಉಪಾಧ್ಯಕ್ಷರು, ಜಿಲ್ಲಾ ಪಂಚಾಯತ್, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲಾ ಮುಖ್ಯ ಕಾರ್ಯನಿರ್ವಾಹಕಿ ಶ್ರೀಮತಿ ತುಳಸಿ, ಉಪ ನಿರ್ದೇಶಕರಾದ ಶ್ರೀ ವಾಲ್ಟರ್ 'ಡಿ' ಮೆಲ್ಲೊ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜ್ಞಾನೇಶ್ವರ್, ತಾಲ್ಲೂಕು ಪಂಚಾಯತ್ ಸದಸ್ಯೆಯರಾದ ಶ್ರೀಮತಿ ಧನ್ಯವತಿ ಹಾಗೂ ಶ್ರೀಮತಿ ರಾಜೀವಿ ಕೆಂಪುಮಣ್ಣು, ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀಮತಿ ಮಂಜುಳ ಉತ್ಸವದ ನಾಯಕರಾದ ಕು.ಜುಲಿಯಾನ ಲಸ್ರಾಡೊ, ಎಲ್‌ಟಿ(ಕಬ್ಸ್), ಶ್ರೀಮತಿ ವಿಮಲಾ ಬಾಯಿ, ಎಲ್‌ಟಿ(ಫ್ಲಾಕ್), ಜೋಯ್‌ಲ್ಯಾಂಡ್ ಶಾಲಾ ಸಂಚಾಲಕರಾದ ಶ್ರೀಮತಿ ಫ್ರಾನ್ಸಿಸ್ ಪಿಂಟೋ, ಅದೇ ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ವೀಣಾ ಭಟ್, ಎಂ.ಸುನೀತ, ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್), ಶ್ರೀ ವಿದ್ಯಾಧರ ಶೆಟ್ಟಿ ಮುಂತಾದವರು ಅಲಂಕರಿಸಿದ್ದರು. ದಕ್ಷಿಣ ಕನ್ನಡ ಜಿಲ್ಲಾ ಮುಖ್ಯ ಆಯುಕ್ತರಾದ ಎನ್.ಜಿ.ಮೋಹನ್‌ರವರು ಸ್ವಾಗತಿಸಿದರು. ಉತ್ಸವದ ಕಾರ್ಯದರ್ಶಿಯಾದ ಶ್ರೀ ತ್ಯಾಗಂ ಹರೇಕಳ ಇವರು ಕಾರ್ಯಕ್ರಮದ ನಿರೂಪಣೆ ಮಾಡಿದರು. ಶ್ರೀ ಸತೀಶ ಕುಂಪಲ ಇವರು ದೀಪ ಬೆಳಗುವುದರೊಂದಿಗೆ ಉತ್ಸವವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ "ಚೈತನ್ಯ" ಎಂಬ ಪುಸ್ತಕವನ್ನು ಶ್ರೀಮತಿ ತುಳಸಿ ಮದ್ದಿನೇನಿ, ಭಾ.ಆ.ಸೇ., ಇವರು ಬಿಡುಗಡೆಗೊಳಿಸಿದರು. ಸಂಜೆ "ಶೃತಿಲಯ ಕಲಾ ಕೇಂದ್ರ" ಕುತ್ತಾರು ಮತ್ತು ಸ್ಥಳೀಯ ಶಾಲಾ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ – ಜಾನಪದ ನೃತ್ಯ ವೈವಿದ್ಯ ಬಹಳ ಸುಂದರವಾಗಿ ಮೂಡಿಬಂತು. ಇದರ ಉದ್ಘಾಟನೆಯನ್ನು ಸೋಮೇಶ್ವರದ ಗ್ರಾಮ ಪಂಚಾಯತ್ ಅಧ್ಯಕ್ಷೆಯಾದ ಶ್ರೀಮತಿ ರಮಣಿ ಸೋಮೇಶ್ವರ್ ಇವರು ನೆರವೇಸಿದರು. ಈ ಕಾರ್ಯಕ್ರಮದಲ್ಲಿ ಜೋಯ್ ಲ್ಯಾಂಡ್ ಶಾಲೆಯ ಸ್ಥಾಪಕ ಅಧ್ಯಕ್ಷರಾದ ಶ್ರೀ ಡೇವಿಡ್ ಪಿಂಟೋ ಮತ್ತು ಇತರರು ಪಾಲ್ಗೊಂಡಿದ್ದರು.

2ನೇ ದಿನ ಕಬ್‌-ಬುಲ್‌ಬುಲ್‌ಗಳಿಗೆ ಬೇರೆ ಬೇರೆ ಗುಂಪುಗಳಲ್ಲಿ ಚಿತ್ರಕಲೆ, ಕರಕುಶಲ ವಸ್ತುಗಳ ತಯಾರಿ, ಬಣ್ಣ ತುಂಬುವ ಸ್ಪರ್ಧೆ ಇತ್ಯಾದಿಗಳು ನಡೆಯಿತು. ನಂತರ 11.00 ಗಂಟೆಯಿಂದ 12.30ರವರೆಗೆ ಗಾಳಿಪಟ ತಯಾರಿ ನಡೆಯಿತು. ಅದರೊಂದಿಗೆ ಶ್ರೀಮತಿ ಸುನೀತ (ಗೈಡರ್) ಅವರ ನೇತೃತ್ವದಲ್ಲಿ 6 ತರದ ಮೋಜಿನ ಆಟಗಳು ನಡೆದು ಮಕ್ಕಳ ಮನಸ್ಸಿಗೆ ಖುಷಿ ನೀಡಿತು. ಈ ಆಟಗಳನ್ನು ಇದೇ ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ವೀಣಾ ಭಟ್ ಇವರು ಹಾಡು ಹೇಳುವುದರ ಮೂಲಕ ಉದ್ಘಾಟಿಸಿದರು. 2.00 ಗಂಟೆಗೆ ಸರಿಯಾಗಿ ಮರಿಗಳಿಂದ ಕಾಡಿನ ಕಥೆ ಹಾಗೂ ಬುಲ್‌ಬುಲ್‌ಗಳಿಂದ ತಾರಾ ಕಥೆ, ಇವುಗಳು ಜಿಲ್ಲಾವಾರು ನಡೆಯಿತು. ಎಲ್ಲರಿಗೂ 4.00 ಗಂಟೆಗೆ ಪಥ ಸಂಚಲನ ನಡೆಯಿತು. ವೃತ್ತ ನಿರೀಕ್ಷಕರಾದ ಶ್ರೀಮತಿ ಭಾರತಿ ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಕೆಂಪು ಹೂ ಮತ್ತು ಕಲರವ, ಸಾಂಸ್ಕೃತಿಕ ಕಾರ್ಯಕ್ರಮದ ಉದ್ಘಾಟನೆಯನ್ನು ಕೋಟೆಕಾರು ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ಶೇಖರ್ ಕನೀರ್ ತೋಟ ಇವರು ಮಾಡಿದರು.

3ನೇ ದಿನ ವಸ್ತು ಪ್ರದರ್ಶನ ಮತ್ತು ಸಾಹಸಮಯ ಚಟುವಟಿಕೆಗಳ ಕಾರ್ಯಕ್ರಮವನ್ನು ಉಳ್ಳಾಲ ಪುರಸಭೆ ಉಪಾಧ್ಯಕ್ಷರಾದ ಶ್ರೀಮತಿ ರಜಿಯಾ ಇಬ್ರಾಹಿಂ ಉದ್ಘಾಟಿಸಿದರು. ನಂತರ ಪ್ರೇಕ್ಷಣೀಯ ಸ್ಥಳಗಳಾದ ಸಂತ ಸೆಬೆಸ್ಟಿಯನ್ನರ ಇಗರ್ಜಿ, ಉಳ್ಳಾಲ ದರ್ಗಾ, ಸೋಮೇಶ್ವರ ದೇವಸ್ಥಾನ ಮತ್ತು ಬೀಚ್‌ಗಳಿಗೆ ಭೇಟಿ

ಏರ್ಪಡಿಸಲಾಗಿತ್ತು. ಸಾಯಂಕಾಲ "ಈಡಿಜಜ ಃಜುಟಿಂ ಒಜ" ಬಗ್ಗೆ ಪ್ರಾಂತೀಯ ಸಂಘಟನಾ ಆಯುಕ್ತರಾದ ಶ್ರೀ ಅನಲೇಂದ್ರ ಶರ್ಮ, ಮಾಹಿತಿ ನೀಡಿದರು. ಊಟ ಮುಗಿಸಿ ಭವ್ಯ ಶಿಬಿರಾಗ್ನಿ, ಜನಪದ ನೃತ್ಯ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ಈ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಿವೃತ್ತ ಸೇನಾನಿ ಸೋಮೇಶ್ವರ ಗ್ರಾಮ ಪಂಚಾಯತ್‌ನ ಸದಸ್ಯರಾದ ಶ್ರೀ ಕೃಷ್ಣಗಟ್ಟಿ ಇವರು ಉದ್ಘಾಟಿಸಿದರು.

ನಾಲ್ಕನೇ ದಿನ, ಅಗ್ನಿ ಶಾಮಕ ದಳದವರಿಂದ ಪ್ರಾತ್ಯಕ್ಷಿಕೆ ನಡೆಯಿತು. ಊಟದ ನಂತರ ಪೇಜೆಂಟ್ ಷೋ, ಜಾನಪದ ಪೋಷಾಕುಗಳೊಂದಿಗೆ ಸಾಂಸ್ಕೃತಿಕ ಕಾರ್ಯಕ್ರಮ, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ವಾಲ್ಟರ್ ಡಿ' ಮೊಲ್ಲೊ, ಹಸಿರು ನಿಶಾನೆ ತೋರಿಸುವುದರೊಂದಿಗೆ ಈ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ದಕ್ಷಿಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳೂ ಉಪಸ್ಥಿತರಿದ್ದರು.

ಸಂಜೆ ನಡೆದ ಸಮಾರೋಪ ಸಮಾರಂಭದ ಅತಿಥಿಗಳಾಗಿ ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ರಮಾನಾಥ ರೈ, ಜಿಲ್ಲಾ ಪಂಚಾಯತ್ ಸ್ವಾಗತ ಸಮಿತಿ ಅಧ್ಯಕ್ಷರು, ಶ್ರೀ ಸತೀಶ್ ಕುಂಪಲ, ತಾಲ್ಲೂಕು ಪಂಚಾಯತ್ ಸದಸ್ಯೆ ಶ್ರೀಮತಿ ದೇವಕಿ ರಾಘುವ, ಜಿಲ್ಲಾ ಉಪ ನಿರ್ದೇಶಕರು ಶ್ರೀ ವಾಲ್ಟರ್ 'ಡಿ' ಮೆಲ್ಲೊ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜ್ಞಾನೇಶ್ವರ್, ಮುಂತಾದ ಪದಾಧಿಕಾರಿಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ರಾತ್ರಿ ಕಬ್-ಮಾಸ್ಟರ್ಸ್, ಫ್ಲಾಕ್ ಲೀಡರ್ಸ್‌ಗಳ ಭವ್ಯ ಶಿಬಿರಾಗ್ನಿ ನಡೆಯಿತು. ಇದರ ಉದ್ಘಾಟನೆಯನ್ನು ಸೋಮೇಶ್ವರ ಗ್ರಾಮ ಪಂಚಾಯಿತಿಯ ಉಪಾಧ್ಯಕ್ಷರಾದ ಶ್ರೀ ರಾಜೇಶ್ ಉಚ್ಚಿಲ, ಇವರು ನೆರವೇರಿಸಿದರು.

ಉತ್ಸವದ 5ನೇ ದಿನ ಸರ್ವಧರ್ಮ ಪ್ರಾರ್ಥನೆ ನೆರವೇರಿತು.

## ರಾಜ್ಯಮಟ್ಟದ ರೋವರ್ಸ್-ರೇಂಜರ್ಸ್, ಸ್ಕೌಟ್ಸ್-ಗೈಡ್ಸ್ "ಪ್ರಕೃತಿ ಅಧ್ಯಯನ ಶಿಬಿರ"

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ, ಉಡುಪಿ ಜಿಲ್ಲಾ ಸಂಸ್ಥೆ, ಶ್ರೀ ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು ಹಾಗೂ ಕುದುರೆಮುಖ ವನ್ಯಜೀವಿ ವಿಭಾಗ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 06-02-2015 ರಿಂದ 10-02-2015 ರ ವರೆಗೆ 5 ದಿನಗಳ ರಾಜ್ಯ ಮಟ್ಟದ ರೋವರ್ಸ್, ರೇಂಜರ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಕೃತಿ ಅಧ್ಯಯನ ಶಿಬಿರವು ಪಶ್ಚಿಮ ಘಟ್ಟಗಳ ತಪ್ಪಲಿನ ಕೊಲ್ಲೂರು ದೇವಸ್ಥಾನ ವಠಾರದಲ್ಲಿ ನಡೆಯಿತು. ಈ ಶಿಬಿರದಲ್ಲಿ ರಾಜ್ಯದ 19 ಜಿಲ್ಲೆಗಳ 49 ಕಾಲೇಜುಗಳಿಂದ ಬಂದ 203 ರೋವರ್ಸ್ ಹಾಗೂ 142 ರೇಂಜರ್ಸ್‌ಗಳು ಹಾಗೂ 28 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ರಾಜ್ಯ ಸಂಘಟನಾ ಆಯುಕ್ತರುಗಳು, ಸ್ಕೌಟ್ಸ್ ಮತ್ತು ಗೈಡ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಸ್ಕೌಟ್ಸ್, ಉಡುಪಿ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಉಡುಪಿ ಜಿಲ್ಲಾ ಸಂಘಟಕರು ಸೇರಿ 18 ರೋವರ್ಸ್ ನಾಯಕರು ಹಾಗೂ 9 ರೇಂಜರ್ಸ್ ನಾಯಕರು ಶಿಬಿರದ ಮಾರ್ಗದರ್ಶಕರಾಗಿ ಆಗಮಿಸಿದ್ದರು.

ದಿನಾಂಕ 06-02-2015 ರಂದು ಸಂಜೆ 4.30 ಕ್ಕೆ ಆಕರ್ಷಕವಾದ ನಗರ ಮೆರವಣಿಗೆ ನಡೆಸಲಾಯಿತು. ಸಾಯಂಕಾಲ 6 ಘಂಟೆಗೆ ಸ್ಥಳೀಯ ಶಾಲಾ ಮಕ್ಕಳಿಂದ ಕಾರ್ಯಕ್ರಮ ವೈವಿಧ್ಯ ನಡೆಯಿತು. ರಾತ್ರಿ 9 ಗಂಟೆಗೆ ಡಾ. ಈಶ್ವರ ಭಟ್‌ರವರು ಪ್ರಕೃತಿ ವೀಕ್ಷಣೆ, ಅಧ್ಯಯನ ಹಾಗೂ ಸಂರಕ್ಷಣೆಯ ಬಗ್ಗೆ ಸ್ಲೈಡ್‌ಶೋ ಗಳೊಂದಿಗೆ ವಿವರಿಸಿದರು.

ದಿನಾಂಕ 07-02-2015 ರಂದು ಆನೆಜರಿ ಪ್ರಕೃತಿ ಅಧ್ಯಯನ ಶಿಬಿರ ಹಾಗೂ ಚಿಟ್ಟೆ ಪಾರ್ಕ್ ಗೆ ಚಾರಣ ನಡೆಸಲಾಯಿತು. ಅಪರಾಹ್ನ 2 ಗಂಟೆಗೆ ಸ್ಕೌಟಿಂಗ್/ಗೈಡಿಂಗ್ ಮೂಲತತ್ವಗಳ ಬಗ್ಗೆ ಶ್ರೀಮತಿ ಎಸ್.ಕೆ. ಪ್ರಭಾ, ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ವಿವರಿಸಿದರು. ಶ್ರೀಮತಿ ಎಸ್.ಕೆ. ಛಾಯಾ, ಪ್ರತಿಜ್ಞೆ ಮತ್ತು ನಿಯಮದ ಬಗ್ಗೆ ಮಾಹಿತಿ

ನೀಡಿದರು. ಸಂಜೆ 4 ಘಂಟೆಗೆ ಉದ್ಘಾಟನಾ ಕಾರ್ಯಕ್ರಮ ನಡೆಯಿತು. ಶ್ರೀ ವಿ ಪ್ರಸನ್ನ, ಕಾರ್ಯನಿರ್ವಹಣಾಧಿಕಾರಿಗಳು, ಶ್ರೀ ಮುಕಾಂಬಿಕಾ ದೇವಸ್ಥಾನ ಕೊಲ್ಲೂರು ಇವರು ಉದ್ಘಾಟನೆಯನ್ನು ನಡೆಸಿಕೊಟ್ಟರು. ಉದ್ಘಾಟನಾ ಭಾಷಣದಲ್ಲಿ ಅವರು ಪ್ರಕೃತಿ ವಿಕೋಪ ಹಾಗೂ ಇನ್ನಿತರ ಆಕಸ್ಮಿಕ ಸಂದರ್ಭಗಳಲ್ಲಿ ಸೇವೆಗೈಯುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಇತರರಿಗೆ ಮಾದರಿಯಾಗಿದೆ ಎಂದರು. ರಾತ್ರಿಯ ಊಟದ ನಂತರ ಶಿಬಿರಾಗ್ನಿ ಕಾರ್ಯಕ್ರಮ ನಡೆಯಿತು.

ದಿನಾಂಕ 08-02-2015 ರಂದು ಕೊಡಚಾದ್ರಿ ಬೆಟ್ಟಕ್ಕೆ ಚಾರಣ ಹಾಗೂ ಪ್ರಕೃತಿ ಅಧ್ಯಯನ ಕೈಗೊಳ್ಳಲಾಯಿತು.

ದಿನಾಂಕ 09-02-2015 ರಂದು ಕೊಲ್ಲೂರು ಪಟ್ಟಣ ಪರಿಸರದ ಸ್ವಚ್ಛತಾ ಅಭಿಯಾನವನ್ನು ಕೈಗೊಳ್ಳಲಾಯಿತು. ಶ್ರೀ ಮುಕಾಂಬಿಕಾ ದೇವಸ್ಥಾನದವರ ಕೋರಿಕೆಯ ಮೇರೆಗೆ 12 ರೋವರ್ಸ್‌ಗಳನ್ನು ಸ್ವಯಂಸೇವಕರಾಗಿ ಒದಗಿಸಲಾಯಿತು. ಅಪರಾಹ್ನ 2 ಗಂಟೆಗೆ ಸ್ಕೌಟಿಂಗ್ ಇತಿಹಾಸದ ಬಗ್ಗೆ ಹಾಗೂ ರೋವರ್ಸ್ ಹಾಗೂ ರೇಂಜರ್ಸ್‌ಗಳ ಮುಂದಿನ ಕಲಿಕೆಯ ಹಂತಗಳ ಬಗ್ಗೆ ಶ್ರೀ ಪ್ರಭಾಕರ ಭಟ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಹಾಗೂ ನಾಯಕರಾದ ಡಾ. ಜಯರಾಮ ಶೆಟ್ಟಿಗಾರ್ ವಿವರಿಸಿದರು. ಅಪರಾಹ್ನ 3 ಗಟೆಂಗೆ ಉಡುಪಿ ಜಿಲ್ಲಾ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಾದ ಶ್ರೀ ಅರುಣ್ ಸಿಂಗ್‌ರವರು ರಸ್ತೆ ಸುರಕ್ಷತೆಯ ಬಗ್ಗೆ ಮಾಹಿತಿ ನೀಡಿದರು. ಮುಂದೆ 4.30 ಕ್ಕೆ ನಡೆದ ಸಮಾರೋಪ ಕಾರ್ಯಕ್ರಮದಲ್ಲಿ ಕೊಲ್ಲೂರು ಗ್ರಾಮಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಲಕ್ಷ್ಮಿ ದೇವಿ ಐತಾಳ್‌ರವರು ಅಧ್ಯಕ್ಷತೆ ವಹಿಸಿದರು. ಕೊಲ್ಲೂರು ವನ್ಯಜೀವಿ ವಲಯ ಅರಣ್ಯಾಧಿಕಾರಿಗಳಾದ ಶ್ರೀ ಶಿವರಾಮ ಆಚಾರ್, ಉಡುಪಿ ಜಿಲ್ಲಾ ಪ್ರಾದೇಶಿಕ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಪರಿಸರ ಅಧಿಕಾರಿಗಳಾದ ಶ್ರೀ ರಾಜಶೇಖರ ಪುರಾಣಿಕ್ ಹಾಗೂ ಬೈಂದೂರು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ರಾಜು ದೇವಾಡಿಗರವರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ ರಾಜಶೇಖರ ಪುರಾಣಿಕ್‌ರವರು ಪರಿಸರ ಮಾಲಿನ್ಯ ನಿಯಂತ್ರಣದ ಬಗ್ಗೆ ಮಾಹಿತಿ ನೀಡಿದರು. ರಾತ್ರಿಯ ಊಟದ ನಂತರ ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮವನ್ನು ಉಡುಪಿ-ಚಿಕ್ಕಮಗಳೂರು ಕ್ಷೇತ್ರದ ಸಂಸದೆ, ರಾಜ್ಯದ ಮಾಜಿ ಇಂಧನ ಸಚಿವರಾದ ಕುಮಾರಿ ಶೋಭಾ ಕರಂದ್ಲಾಜೆಯವರು ಉದ್ಘಾಟಿಸಿದರು.

ದಿನಾಂಕ 10-02-2015 ರಂದು ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು.

---

## ಅಭಿನಂದನೆಗಳು

ಭಾರತೀಯ ದಲಿತ ಸಾಹಿತ್ಯ ಅಕಾಡಮಿಯ ವತಿಯಿಂದ ದೆಹಲಿಯಲ್ಲಿ ದಿನಾಂಕ 13-12-2014 ರಂದು ನಡೆದ 30ನೇ ರಾಷ್ಟ್ರೀಯ ಲೇಖಕರ ಮತ್ತು ಸಾಮಾಜಿಕ-ಶೈಕ್ಷಣಿಕ ರಂಗದಲ್ಲಿ ಉತ್ತಮ ಸೇವೆ ಸಲ್ಲಿಸಿದವರಿಗೆ ಸನ್ಮಾನ ಮತ್ತು ರಾಷ್ಟ್ರೀಯ ಪ್ರಶಸ್ತಿಯನ್ನು ಪ್ರಧಾನ ಮಾಡಲಾಯಿತು. ಈ ಸಮ್ಮೇಳನದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಯಚೂರು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ **ರಾವುತ್ ರಾವ್ ಬರೂರ** ಇವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ರಾಷ್ಟ್ರೀಯ ಅಕಾಡಮಿಯಿಂದ **"ಮಹಾತ್ಮ ಜ್ಯೋತಿಬಾ ಫುಲೆ ರಾಷ್ಟ್ರೀಯ ಫೆಲೋಷಿಪ್ ಪ್ರಶಸ್ತಿ"** ಯನ್ನು ರಾಷ್ಟ್ರೀಯ ಅಧ್ಯಕ್ಷರಾದ **ಡಾ॥ ಎಸ್.ಪಿ. ಸುಮನಾಕ್ಷರ** ಇವರು ಪ್ರಶಸ್ತಿ ಪ್ರಧಾನ ಮಾಡಿದರು.




ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು

## ಬಾಗಲಕೋಟೆ

ಇಂದಿನ ತಂತ್ರಜ್ಞಾನ ಯುಗದಲ್ಲಿ ಮಕ್ಕಳ ಜೀವನ ಶೈಲಿ ಸಂಪೂರ್ಣ ಹಾಳಾಗತೊಡಗಿದೆ. ಪ್ರತಿಯೊಬ್ಬ ಮಕ್ಕಳು ಶಿಸ್ತು, ಸದೃಢ ದೈಹಿಕ ಸಾಮರ್ಥ್ಯ ಹೆಚ್ಚಿಸಿಕೊಳ್ಳಲು ಹಾಗೂ ಸಮಾಜದಲ್ಲಿ ಆರೋಗ್ಯವಂತರಾಗಿ ಜೀವನ ನಡೆಸಲು ಸ್ಕೌಟ್ ತರಬೇತಿ ಸಹಕಾರಿಯಾಗಲಿದೆ ಎಂದು ಸರಕಾರಿ ನಿವೃತ್ತ ನೌಕರರ ಸಂಘದ ಅಧ್ಯಕ್ಷ ಶ್ರೀ ಬಸವರಾಜ ಡಿ. ಕರಣಿ ನುಡಿದರು. ದಿನಾಂಕ 03-12-2014 ರಂದು ವೆಂಕಟೇಶ ಕನ್ನಡ ಮಾಧ್ಯಮ ಪ್ರೌಢಶಾಲೆಯಲ್ಲಿ ಸ್ಕೌಟ್ ದಳ ಘಟಕವನ್ನು ಸಸಿಗೆ ನೀರು ಹಾಕುವ ಮೂಲಕ ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಸಂಸ್ಥೆಯ ಕಾರ್ಯದರ್ಶಿ ಶ್ರೀ ಗೋವಿಂದ ಬಜಾಜ್ ಅಧ್ಯಕ್ಷತೆ ವಹಿಸಿ ಶಾಲಾ ವಿದ್ಯಾರ್ಥಿಗಳು ಸಿದ್ಧಪಡಿಸಿದ ಚಿತ್ರಕಲೆ ಹಸ್ತ ಪ್ರತಿ ಪುಸ್ತಕ ಬಿಡುಗಡೆಗೊಳಿಸಿ ಮಾತನಾಡಿ ವಿದ್ಯಾರ್ಥಿಗಳು ಚಿತ್ರಕಲೆಯನ್ನು ಮೈಗೂಡಿಸಿಕೊಳ್ಳುವುದ ರಿಂದ ದೇಶದ ಸಂಸ್ಕೃತಿ ಉಳಿಸಿ ಬೆಳಸಿದಂತಾಗುತ್ತದೆ ಎಂದು ಹೇಳಿದರು.

ಮುಖ್ಯ ಶಿಕ್ಷಕ ಶ್ರೀ ಆರ್.ಎನ್. ಕಾಟವಾ, ಶಿಕ್ಷಕ ಶ್ರೀ ರಾಜಶೇಖರ ಪಾಟೀಲ, ಶ್ರೀ ಎಂ.ಎಂ. ಬಿಂಗೇರಿ, ಶ್ರೀ ವಿ.ಕೆ. ಚರಂತಿಮಠ, ಶ್ರೀ ವಿ.ಟಿ. ದವಾಣಿ, ಶ್ರೀ ಎಸ್.ಈ. ಕಬ್ಬಲಗೇರಿ, ಎಚ್.ಬಿ. ಅಂಬಿಗೇರ ಉಪಸ್ಥಿತರಿದ್ದರು. ಶಿಕ್ಷಕ ಆರ್.ವಿ. ಪಾಟೀಲ ಸ್ವಾಗತಿಸಿದರು. ಶ್ರೀ ಎಂ.ಎಂ. ಜಗತಾಪ ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ಎಚ್.ಬಿ. ಅಂಬಿಗೇರ ವಂದಿಸಿದರು.

ದಿನಾಂಕ 03-12-2014 ರಿಂದ 10-12-2014 ರ ವರೆಗೆ ಶ್ರೀ ಶಿವಾನಂದ ಮಠ ಹಂಸನೋರ ತಾ॥ ಬಾದಾಮಿ ಇಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್‌ಗಳ ಮಾಹಿತಿ ಶಿಬಿರ ಹಾಗೂ ಮೂಲ ತರಬೇತಿ ಶಿಬಿರವನ್ನು ಜರುಗಿಸಲಾಯಿತು. ಶಿಬಿರದಲ್ಲಿ ಜಿಲ್ಲೆಯ ಒಟ್ಟು 53 ಶಿಕ್ಷಕರು 23 ಶಿಕ್ಷಕಿಯರು ಪಾಲುಗೊಂಡಿದ್ದರು.

ಸ್ಕೌಟ್ ವಿಭಾಗಕ್ಕೆ ನಾಯಕರುಗಳಾಗಿ ಶ್ರೀ ಎಸ್.ಬಿ. ಭಜಂತ್ರಿ ಎ.ಎಲ್.ಟಿ.(ಸ್ಕೌ) ಹಾಗು ಶ್ರೀ ಎಸ್.ಎಂ. ಚಳಗೇರಿ ಎ.ಎಲ್.ಟಿ.(ಸ್ಕೌ.) ರವರುಗಳು ಕಾರ್ಯನಿರ್ವಹಿಸಿದರು. ದಿನಾಂಕ 06-12-2014 ರಂದು ಶ್ರೀ ಸಿದ್ಧೇಶ್ವರ ಶ್ರೀಗಳು ವಿಜಯಪುರ ಇವರು ಶಿಬಿರಕ್ಕೆ ಭೇಟ ನೀಡಿ, ಶಿಬಿರಾರ್ಥಿಗಳಿಗೆ ಆಶೀರ್ವಚನ ನೀಡಿದರು. ಇಲಾಖೆಯ ಅಧಿಕಾರಿಗಳು ಶ್ರೀ ಎ.ಎಂ. ವಡಗೇರಿ ಬಿ.ಇ.ಓ., ಬಾದಾಮಿ ಶ್ರೀ ಬಿ.ಕೆ. ನಂದನೋರ ಡಿ.ಸಿ.,(ಎಸ್.) ರವರು ಭೇಟಿನೀಡಿ ಶಿಬಿರಾರ್ಥಿಗಳನ್ನು ಕುರಿತು ಮಾತನಾಡಿದರು.

## Bangalore South District

Scouts-Guides Rally was conducted at V.S.S. International Public School, Nagadevana halli, under the auspicious of Vijayanagara Local Association on 01-01-2015. The Rally was inaugurated by Dr. B.S. Naveen, Director V.S.S. School in the morning.

Various activities like improvised shelter, Flag Staff Construction were conducted. Mr. M.K.Khan D.C.C., Bangalore South was the Chief Scout at the Valedictory Function held in the evening.

Sri Chandrashekharachar, Former Secratary was felicitated onthe occasion. About 480 participants took part in the Rally.

## ಬೀದರ್

ದಿನಾಂಕ 01-01-2015 ರಂದು ಬೀದರ್ ಜಿಲ್ಲೆ ಔರಾದ ತಾಲೂಕು ಸ್ಥಳೀಯ ಸಂಸ್ಥೆ, ಸರಕಾರಿ ಪ್ರೌಢಶಾಲೆ ಹೆಡಗಾಪೂರದ ಸ್ವಾಮಿ ವಿವೇಕಾನಂದ ಸ್ಕೌಟ್ ದಳದ ಸ್ಕೌಟ್‌ಗಳು ನೂತನ ವರ್ಷಾಚರಣೆಯನ್ನು ಆಚರಿಸಿದರು. ಅಂದು ಶಾಲೆಯ ಸಭಾಂಗಣದಲ್ಲಿ ಸ್ಕೌಟ್ಸ್‌ಗಳು ಸಿಹಿ ಹಂಚಿದರು. ಕಾರ್ಯಕ್ರಮದಲ್ಲಿ ಶಾಲೆಯ ಮುಖ್ಯ ಗುರು ಸೂರ್ಯಕಾಂತ ಮುತ್ರಂಚಿ, ಬಸವರಾಜ ಮಠಪತಿ, ನಾಗೇಂದ್ರ ಬಿರಾದಾರ, ಅನೀಲ ಶೆರಿಶಾರ ಮುಂತಾದವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರೇರಣೆ ನೀಡಿದರು.

* ಬೀದರ ಜಿಲ್ಲೆಯ ಹುಮನಾಬಾದ ಸ್ಥಳೀಯ ಸಂಸ್ಥೆಯ ದಿ. ಮಾಣಿಕ ಪಬ್ಲಿಕ್ ಸ್ಕೂಲ್‌ನಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ನೂತನ ವರ್ಷಾಚರಣೆಯನ್ನು ಆಚರಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಜೈಪಾಲರಡ್ಡಿ, ಗೈಡ್ಸ್ ಕ್ಯಾಪ್ಟನ್ ಕು. ಸತ್ಯವತಿ ಹಾಗೂ ಸಂಸ್ಥೆಯ ಪ್ರಾಚಾರ್ಯ ಶ್ರೀಮತಿ ಸುಮಂಗಲಾ ಜಾಗಿರದಾರ ಶುಭಕೋರಿದರು.

## ಚಿತ್ರದುರ್ಗ

ದಿನಾಂಕ 03-12-2014 ರಂದು ಸ್ಥಳೀಯ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ಹೊಳಲ್ಕೆರೆ ತಾಲ್ಲೂಕು ಇವರು ಸ್ಕೌಟ್ಸ್ - ಗೈಡ್ಸ್ ಸದ್ಭಾವನಾ ರ್‍ಯಾಲಿ ಹಾಗೂ ಚಿಣ್ಣರ ಮೇಳವನ್ನು ಆಯೋಜಿಸಿದ್ದರು.

ಶ್ರೀ ಶ್ರೀ ಶ್ರೀ ಬಸವಮೂರ್ತಿ ಮಾದರ ಚನ್ನಯ್ಯ ಮಹಾಸ್ವಾಮಿಗಳು ಹಾಗೂ ಬ್ರಹ್ಮಕುಮಾರಿ ಸುಮಿತ್ರ ಅಕ್ಕನವರು ಇವರುಗಳ ದಿವ್ಯ ಸಾನಿಧ್ಯದಲ್ಲಿ ಶ್ರೀ ಹೆಚ್. ಆಂಜನೇಯ, ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಸಚಿವರು ಹಾಗು ಚಿತ್ರದುರ್ಗ ಜಿಲ್ಲಾ ಉಸ್ತುವಾರಿ ಸಚಿವರು ಇವರು ಉದ್ಘಾಟಿಸಿದರು.

ವಿಶೇಷ ಆಹ್ವಾನಿತರಾಗಿ ಸನ್ಮಾನ್ಯಶ್ರೀ ಗಿರಿ ಎಂ. ಜಾನಕಲ್, ಅಧ್ಯಕ್ಷರು ಚಿತ್ರದುರ್ಗ ಜಿಲ್ಲಾ ಪಂಚಾಯತ್ ಹಾಗೂ ಶ್ರೀ ಹೆಚ್.ಸಿ. ಪ್ರಭಾಕರ್ ಪ್ರೊಪ್ರೈಟರ್ ಸೂರ್ಯ ಸನ್ ಪ್ರಾಜೆಕ್ಟ್ ಬೆಂಗಳೂರು ಇವರು ಆಗಮಿಸಿದ್ದರು.

ಮುಖ್ಯ ಅತಿಥಿಗಳಾಗಿ ಶ್ರೀ ಎಮ್. ರೇವಣಸಿದ್ಧಪ್ಪ ಉಪನಿರ್ದೇಶಕರು ಆಡಳಿತ ಸಾರ್ವಜನಿಕ ಶಿಕ್ಷಣ ಇಲಾಖೆ ಚಿತ್ರದುರ್ಗ. ಶ್ರೀ ಎಮ್.ಹೆಚ್. ಜಯಣ್ಣ ಪ್ರಭಾರೆ ಜಿಲ್ಲಾ ದೈ.ಶಿ. ಅಧೀಕ್ಷಕರು ಸಾ.ಶಿ.ಇ. ಚಿತ್ರದುರ್ಗ ಶ್ರೀ ಡಿ.ಎ. ತಿಮ್ಮಣ್ಣ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಾ.ಶಿ.ಇ. ಹಾಗು ಛೇರ್ಮನ್ನರು ಭಾ.ಸ್ಕೌ.ಗೈ. ಸ್ಥಳೀಯ ಸಂಸ್ಥೆ ಹೊಳಲ್ಕೆರೆ. ಶ್ರೀಮತಿ ಸುಜಯಾ ಶಿವಪ್ರಕಾಶ್, ರಾಜ್ಯ ಸ್ಥಾನಿಕ ಆಯುಕ್ತರು (ಗೈಡ್ಸ್), ಶ್ರೀ ಪಿ.ಎಲ್. ಸುರೇಶ್ ರಾಜು ಜಿಲ್ಲಾ ಸ್ಕೌಟ್ಸ್ ಆಯುಕ್ತರು (ಸ್ಕೌ), ಶ್ರೀಮತಿ ಹೇಮಂತಿನಿ ಪ್ರಕಾಶ್ ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಜಿ.ಎಸ್. ಚಂದ್ರಪ್ರಕಾಶ್ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಸಿ.ಪಿ. ಸುಶೀಲಾ ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಉಪಸ್ಥಿತರಿದ್ದರು.

* ದಿನಾಂಕ 19-12-2014 ರಂದು ಹಿರಿಯೂರು ರೋಟರಿ ಸಭಾಭವನದಲ್ಲಿ ಹಿರಿಯೂರು ತಾಲೂಕಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಸಮಾವೇಶದ ಉದ್ಘಾಟನೆಯನ್ನು ಬಿ.ಇ.ಒ., ಶ್ರೀ ಹನುಮಂತರಾಯಪ್ಪ ರವರು ಸಸಿಗೆ ನೀರು ಹಾಕುವುದರೊಂದಿಗೆ ನೆರವೇರಿಸಿ, ಸ್ಕೌಟ್-ಗೈಡ್‌ಗಳಿಗೆ ಶಿಸ್ತು, ಸಂಯಮ, ದೈವಭಕ್ತಿ, ದೇಶಭಕ್ತಿ. ಮುಂತಾದ ಉದಾತ್ತ ಗುಣಗಳನ್ನು ಬೆಳಸುವಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಪ್ರಮುಖ ಪಾತ್ರ ವಹಿಸಿದೆ. ಹೀಗಾಗಿ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಘಟಕಗಳನ್ನು ಕಡ್ಡಾಯವಾಗಿ ತೆರೆಯುವಂತೆ ಶಿಕ್ಷಕರಿಗೆ ಕರೆ ನೀಡಿದರು. ಸಂಸ್ಥೆಯ ಹಾಗೂ ಸಮಾವೇಶ ಅಧ್ಯಕ್ಷರಾದ ಶ್ರೀ ಸುಂದರರಾಜ್ ರವರು ವಿದ್ಯಾರ್ಥಿಗಳು ಮತ್ತು ಶಿಕ್ಷಕರು, ಸ್ವಯಂ ಪ್ರೇರಣೆಯಿಂದ ಇಂತಹ ಸೇವಾ ಸಂಸ್ಥೆಗಳಲ್ಲಿ ಭಾಗವಹಿಸಬೇಕು ಎಂದು ನುಡಿದರು.

* ದಿನಾಂಕ 21-12-2014 ರಂದು ಹೊಳಲ್ಕೆರೆ ಸ.ಹಿ.ಮಾ.ಪ್ರಾ.ಶಾಲೆ ಸಭಾಭವನದಲ್ಲಿ ಹೊಳಲ್ಕೆರೆ ತಾಲೂಕಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಸಮಾವೇಶದ ಉದ್ಘಾಟನೆಯನ್ನು ಬಿ.ಇ.ಓ., ಶ್ರೀ ತಿಮ್ಮಣ್ಣ ರವರು ನೆರವೇರಿಸಿ ತಾಲೂಕಿನ ಎಲ್ಲ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಶಿಕ್ಷಣದ ಶಾಖೆಗಳನ್ನು ಪ್ರಾರಂಭಿಸಿ ಉದಾತ್ತ ಗುಣಗಳನ್ನು ಬೆಳೆಸುವಂತೆ ಶಿಕ್ಷಕರ ಹಾಗೂ ಶಾಲಾ ಮುಖ್ಯಸ್ಥರ ಗಮನ ಸೆಳೆಯುವಲ್ಲಿ ಯಶಸ್ವಿಯಾಗುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕೆಂದು ಹೇಳಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಮೋಹನ ನಾಗರಾಜ್ ತಾಲ್ಲೂಕಾ ಪಂಚಾಯತಿ /ಗ್ರಾಮ ಪಂಚಾಯತಿಗಳ ಅನುದಾನದಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಮವಸ್ತ್ರವನ್ನು ಉಚಿತವಾಗಿ ಹಂಚುವಲ್ಲಿ ತಂಡದೊಂದಿಗೆ ಶ್ರಮಿಸುತ್ತೇನೆಂದು ನುಡಿದರು.

## ಹಾಸನ

ದಿನಾಂಕ 25-12-2014 ರಂದು ಅರಸೀಕೆರೆ ತಾಲ್ಲೂಕಿನ ಗಂಡಸಿ ಸಂತೆ ಮೈದಾನದ ಸ.ಪ್ರೌ.ಶಾಲೆಯ ಸ್ನೇಹ ಗೈಡ್ಸ್ ಘಟಕದ ವತಿಯಿಂದ 4 ಕಿ.ಮೀ. ಸಮೀಪದಲ್ಲಿರುವ ಚಲ್ಲಾಪುರ ಗ್ರಾಮಕ್ಕೆ ಸ್ವಚ್ಛ ಅಭಿಯಾನದ ಅಡಿಯಲ್ಲಿ ಸ್ವಚ್ಛತೆಯ ಬಗ್ಗೆ ಅರಿವು ಮೂಡಿಸುವ ಸೈಕಲ್ ಹೈಕಿಂಗ್ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಧ್ವಜಾರೋಹಣದ ನಂತರ ಚಲ್ಲಾಪುರ ಗ್ರಾಮದ ಶಾಲಾ ಆವರಣ, ಗ್ರಾಮದ ರಸ್ತೆಗಳು, ದೇವಾಲಯದ ಆವರಣಗಳನ್ನು ಸ್ವಚ್ಛಗೊಳಿಸುವ ಮೂಲಕ ಗ್ರಾಮದ ಜನರಲ್ಲಿ ಸ್ವಚ್ಛತೆ, ಗ್ರಾಮ ನೈರ್ಮಲ್ಯದ ಬಗ್ಗೆ ಅರಿವು ಮೂಡಿಸಲಾಯಿತು.

ಮಧ್ಯಾಹ್ನದ ಅವಧಿಯಲ್ಲಿ ಸಮೀಪದ ಅರೆಕಲ್ಲು ತಿರುಪತಿ ದೇವಾಲಯದ ಆವರಣವನ್ನು ಸ್ವಚ್ಛಗೊಳಿಸಲಾಯಿತು. ಸಂಜೆ ಅವಧಿಯಲ್ಲಿ ಗೈಡ್ಸ್ ಘಟಕದವತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಈ ಕಾರ್ಯಕ್ರಮದಲ್ಲಿ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ತಿಮ್ಮೇಶ್ ರವರು ಭಾರತ್ ಸ್ಕೌಟ್ಸ್ - ಗೈಡ್ಸ್, ಸ್ಥಳೀಯ ಸಂಸ್ಥೆವತಿಯಿಂದ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ವಿಷ್ಣುಮೂರ್ತಿ ಭಟ್ ಮತ್ತು ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾಮಹೇಶ್ವರ್ ಭಾಗವಹಿಸಿ ಚಟುವಟಿಕೆಗಳನ್ನು ಪ್ರೋತ್ಸಾಹಿಸಿದರು. ಈ ಎಲ್ಲಾ ಕಾರ್ಯಕ್ರಮಗಳನ್ನು ಗೈಡ್ ಕ್ಯಾಪ್ಟನ್ ಶ್ರೀಮತಿ ಕಾಮೇಶ್ವರಿಭಟ್ ಸಂಘಟಿಸಿ ವ್ಯವಸ್ಥೆ ಗೊಳಿಸಿದ್ದರು.

* ದಿನಾಂಕ 07-01-2015 ರಂದು ತಾಲ್ಲೂಕು ಆಡಳಿತ, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ-ಅರಸಿಕೆರೆ ವತಿಯಿಂದ "ಹೊಯ್ಸಳ ಉತ್ಸವ"ವನ್ನು ಆಚರಿಸಲಾಯಿತು. ಅರಸೀಕೆರೆಯ ಹೊಯ್ಸಳರ ಕಾಲದ ಶಿವಾಲಯದ ಆವರಣದಿಂದ ಹೊರಟ ಮೆರವಣಿಗೆಯ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆ ವತಿಯಿಂದ ಸ್ಕೌಟರ್ ಸತೀಶ್ ಕೆ.ಎಂ. ಸತೀಶ್ ಎ.ಎಸ್. ಮಹೇಶ್ ಬಿ.ಎಸ್. ಶಂಕರಸ್ವಾಮಿ, ಗೈಡರ್ ಶ್ರೀಮತಿ ಈರಜಾಕ್ಷಮ್ಮ ಹೆಚ್.ಡಬ್ಲ್ಯೂ.ಬಿ.(ಜಿ) ಕಾರ್ಯದರ್ಶಿ ಶ್ರೀಮತಿ ಜೆ.ಎಲ್. ಲೀಲಾಮಹೇಶ್ವರ್ ಹೆಚ್.ಡಬ್ಲ್ಯೂ.ಬಿ.(ಎಸ್.) ಸ್ವಯಂ ಸೇವಕರಾಗಿ ಭಾಗವಹಿಸಿ ಹೊಯ್ಸಳ ಉತ್ಸವದ ಮೆರವಣಿಗೆಯ ಯಶಸ್ಸಿಗೆ ಸಹಕರಿಸಿದರು.

* ದಿನಾಂಕ 08-01-2015 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಅರಸೀಕೆರೆ ವತಿಯಿಂದ ಸುಕ್ಷೇತ್ರ ವರದಾಪುರದಲ್ಲಿ 3 ದಿನಗಳ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಅಂದು ಬೆಳಿಗ್ಗೆ ಅರಸೀಕೆಯ ಇನ್ನರ್ ವೀಲ್ ಕ್ಲಬ್‌ನ ಅಧ್ಯಕ್ಷರಾದ ಶ್ರೀಮತಿ ಶೋಭಾ ನಾಗೇಂದ್ರರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಈ ಶಿಬಿರದಲ್ಲಿ ಸ್ಕೌಟ್ ವಿಭಾಗಕ್ಕೆ ನಾಯಕರಾಗಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಶ್ರೀ ಜೆ.ಎಲ್ ಲೀಲಾಮಹೇಶ್ವರ್, ಹೆಚ್.ಡಬ್ಲ್ಯೂ.ಬಿ.(ಎಸ್) ಮತ್ತು ಗೈಡ್ ವಿಭಾಗಕ್ಕೆ ನಾಯಕಿಯರಾಗಿ ಶ್ರೀಮತಿ ಲೋಕೇಶಮ್ಮ ಹೆಚ್.ಡಬ್ಲ್ಯೂ.ಬಿ.(ಜಿ), ಕಾಮೇಶ್ವರಿ ಭಟ್ ಎ.ಎಲ್.ಟಿ.(ಗೈ) ರವರು ಮಾರ್ಗದರ್ಶಿಯಾಗಿ ಭಾಗವಹಿಸಿದ್ದರು.

ದಿನಾಂಕ 10–01–2015 ರಂದು ಶ್ರೀ ಯೋಗೀಶಾಚಾರ್ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಸ್ಕೌಟ್ಸ್–ಗೈಡ್ಸ್‌ಗಳಿಗೆ ಪ್ರಮಾಣ ಪತ್ರ ವಿತರಿಸಲಾಯಿತು.

* ದಿನಾಂಕ 19–01–2015 ರಂದು ಅರಸೀಕೆರೆಯ ಶ್ರೀಕೋಡಿಮಠ ಪದವಿ ಪೂರ್ವ ಕಾಲೇಜಿನಲ್ಲಿ 24 ರೋವರ್ಸ್ ಗಳನ್ನೊಳಗೊಮಡ "ಶ್ರೀ ನೇತಾಜಿ ರೋವರ್ಸ್ ಕ್ರೂವ್"ನ್ನು ಉದ್ಘಾಟಿಸಲಾಯಿತು.

ಜಿಲ್ಲಾ ತರಬೇತಿ ಆಯುಕ್ತ (ಗೈ) ರಾದ ಶ್ರೀಮತಿ ಕಾಮೇಶ್ವರಿ ಭಟ್ ಕ್ರ್ಯೂವ್ ಅನ್ನು ಉದ್ಘಾಟಿಸಿ ಇಂದಿನ ಯುವಕ, ಯುವತಿಯರಲ್ಲಿ ಸ್ವಾವಲಂಭನೆ, ರಾಷ್ಟ್ರಭಕ್ತಿ, ಸೇವಾಮನೋಭಾವವನ್ನು ರೂಢಿಸಿ ಸಮಾಜಕ್ಕೆ ಜವಾಬ್ದಾರಿಯುತ ಪ್ರಜೆಗಳನ್ನು ತಯಾರು ಮಾಡುವಲ್ಲಿ ರೋವರಿಂಗ್ ಶಿಕ್ಷಣವು ಬಹು ಮುಖ್ಯ ಪಾತ್ರ ವಹಿಸುತ್ತದೆ ಎಂದರು.

ನಂತರ ಮಾತನಾಡಿದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಹಾಗೂ ರಾಜ್ಯ ಸ್ಕೌಟರ್ ಪ್ರತಿನಿಧಿಯಾದ ಶ್ರೀ ಲೀಲಾಮಹೇಶ್ವರ್ ಸ್ಕೌಟಿಂಗ್ ಮತ್ತು ಗೈಡಿಂಗ್ ಚಳುವಳಿಯು ಈಗಾಗಲೇ ಒಂದು ಶತಮಾನವನ್ನು ಪೂರೈಸಿದ್ದು ಪ್ರಪಂಚದ 216 ರಾಷ್ಟ್ರಗಳಲ್ಲಿ ತನ್ನ ಅಸ್ತಿತ್ವವನ್ನು ಹೊಂದಿರುವ ಜಾಗತಿಕ ಯುವ ಸಂಘಟನೆಯಾಗಿದ್ದು ಮಕ್ಕಳಲ್ಲಿನ ಸೃಜನಶೀಲ ಶಕ್ತಿ ಸಾಮರ್ಥ್ಯಗಳನ್ನು ಪೋಷಿಸುವ ಜೊತೆಗೆ ಶಿಸ್ತು, ನಾಯಕತ್ವದ ಗುಣ, ಸೇವೆಯ ಸ್ವರೂಪ ಕೊಡುವ ಶಿಕ್ಷಣ ಇದಾಗಿದೆ ಎಂದರು. ಕಾರ್ಯಕ್ರಮದಲ್ಲಿ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಬಿ.ಕೆ. ಯೋಗೀಶಾಚಾರ್ ಉಪಸ್ಥಿತರಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಪಿ.ಸಿ. ಬಸವರಾಜ್ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ರೋವರ್ ಲೀಡರ್ ಶ್ರೀ ಮಲ್ಲೇಶಪ್ಪನವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು.

* Guiders of Sadhana Guide Company, Shree Venkateshwara Education Trust, Holenarasipura. Participated in Hoysala Utsava Conducted at Bayalu Ranga Mandira, Holenarasipura. They did their service by maintaining discipline among the people and also helped in other arrangements. They also lead the procession in all the main streets of Holenarasipura town.

On 18th of Jan. 2015 Pulse Polio programme was conducted in many places of Holenarasipura. The Guides of Sadhana Guide Company, Shree Venkateshwara Education Trust, Holenarasipura, rendered their service during the programme. One group served in government hospital and one more group served in goverment main bus stand, Holenarasipura. Guide Captain Kumuda. R. was incharge of the activities.

## ಕಾರವಾರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾರವಾರ ಜಿಲ್ಲಾ ಸಂಸ್ಥೆ, ಸಾರ್ವಜನಿಕ ಶಿಕ್ಷಣ ಇಲಾಖೆ ಕಾರವಾರ ಹಾಗೂ ಬೀನಾ ವೈದ್ಯ ಇಂಟರ್ ನ್ಯಾಷನಲ್ ಪಬ್ಲಿಕ್ ಶಾಲೆ, ಮುರ್ಡೇಶ್ವರ ಸಂಯುಕ್ತಾಶ್ರಯದಲ್ಲಿ 7 ದಿನಗಳ ಕಾಲ ಸ್ಕೌಟ್ಸ್–ಗೈಡ್ಸ್ ಶಿಕ್ಷಕರಿಗೆ ಮೂಲ ತರಬೇತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು.

ಈ ಶಿಬಿರಕ್ಕೆ 5 ತಾಲ್ಲೂಕಿನ ಶಿಕ್ಷಕ/ಶಿಕ್ಷಕಿಯರು ಹಾಜರಿದ್ದರು. ಬೀನಾ ವೈದ್ಯ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಟ್ರೇಜಾ ಫರ್ನಾಂಡೀಸ್‌ರವರು ಸಾಂಕೇತಿಕವಾಗಿ ಉದ್ಘಾಟನೆ ಮಾಡುವುದರ ಮೂಲಕ ಶಿಬಿರ ಪ್ರಾರಂಭವಾಯಿತು. ಈ ಶಿಬಿರಕ್ಕೆ ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಜಿ.ಸಿ. ದೇವರಾಜ, ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಭಾರತಿ ಡಯಾಸ್ ಕಾರ್ಯನಿರ್ವಹಿಸಿದರು. ಈ ಶಿಬಿರಕ್ಕೆ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಬಾಹಿತ್‌ರವರು ಬೇಟಿ ನೀಡಿ ಶಿಬಿರಾರ್ಥಿಗಳಿಗೆ ಶುಭ ಕೋರಿದರು. ಮುಕ್ತಾಯ ಸಮಾರಂಭಕ್ಕೆ ಹೊನ್ನಾವರ ಭಟ್ಕಳ ಕ್ಷೇತ್ರದ ಶಾಸಕರಾದ ಶ್ರೀ ಮಂಕಾಳು ಎಸ್. ವೈದ್ಯರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸ್ಕೌಟ್-ಗೈಡ್ ಚಳುವಳಿ ಇನ್ನೂ ಬಹುಕಾಲ ಚಿರಾಯುವಾಗಲಿ ಎಂದರು. ಪ್ರಾಂಶುಪಾಲರು ಉಪಸ್ಥಿತರಿದ್ದು ಶಿಬಿರಾರ್ಥಿಗಳಿಗೆ ಶುಭ ಕೋರಿದರು. ಅಧ್ಯಕ್ಷತೆಯನ್ನು ವಹಿಸಿದ ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಎಸ್.ಎಸ್. ಭಟ್ ರವರು ಮಕ್ಕಳಲ್ಲಿ ಹುದುಗಿರುವ ಪ್ರತಿಭೆಯನ್ನು ಹೊರಹಾಕಲು ಈ ಚಳುವಳಿ ಸಹಕಾರಿಯಾಗಿದೆ ಎಂದರು. ಈ ಸಮಾರಂಭಕ್ಕೆ ಸ್ವಾಗತವನ್ನು ಶ್ರೀ ಆರ್.ಟಿ. ಹೆಬ್ಬಾರ್ ಮಾಡಿದರು. ಈ ಶಿಬಿರದ ಉಸ್ತುವಾರಿಯನ್ನು ನೋಡಿಕೊಂಡ ಶ್ರೀ ಬಿ.ಡಿ. ಫರ್ನಾಂಡೀಸ್‌ರವರು ವಂದಿಸಿದರು ಹಾಗು ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀಮತಿ ಭಾರತಿ ಡಯಾಸ್ ರವರು ನಿರೂಪಿಸಿ ಈ ಶಿಬಿರವನ್ನು ಸಂಘಟಿಸಿದರು.

## ಹಾವೇರಿ

* ದಿನಾಂಕ 08-12-2014 ರಿಂದ 14-12-2014 ರ ವರೆಗೆ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ಹಾವೇರಿಯಲ್ಲಿ ಸ್ಕೌಟ್ಸ್ ಮಾಸ್ಟರ್ಸ್, ಕಬ್ ಮಾಸ್ಟರ್ ಮತ್ತು ಗೈಡ್ಸ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರ ಮತ್ತು ಸ್ಕೌಟ್ಸ್ ಮಾಸ್ಟರ್ಸ್ ಮುಂದುವರೆದ ತರಬೇತಿ ಶಿಬಿರವು ನಡೆಯಿತು. ಶಿಬಿರದ ಉದ್ಘಾಟನೆಯನ್ನು ಶ್ರೀ ಎಂ.ಡಿ. ಬಳ್ಳಾರಿ ಪ್ರಾಚಾರ್ಯರು ಡಯಟ ಹಾವೇರಿ ಇವರು ಉದ್ಘಾಟನೆ ಮಾಡಿದರು. ತರಬೇತಿ ಕಾಲದಲ್ಲಿ ಶ್ರೀ ಜಯಕುಮಾರ ಡೈರೆಕ್ಟರ್ ಎನ್.ಸಿ.ಇ.ಆರ್.ಟಿ. ಬೆಂಗಳೂರು ರವರು ಸಂದರ್ಶನ ನೀಡಿ ಎಲ್ಲ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ದಿನಾಂಕ 10-12-2014 ರಂದು ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಗೋವಿಂದಸ್ವಾಮಿ ಡೆಪ್ಯೂಟಿ ಸೆಕ್ರೆಟರಿ, ಜಿಲ್ಲಾ ಪಂಚಾಯತ್ ಹಾವೇರಿ ಇವರು ಉದ್ಘಾಟನೆ ಮಾಡಿದರು.

ದಿನಾಂಕ 13-12-2014 ರಂದು ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಕೆ.ಬಿ. ಆಂಜನಪ್ಪ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾವೇರಿ ಇವರು ಭಾಗವಹಿಸಿ ಸ್ಕೌಟ್ಸ್-ಗೈಡ್ಸ್ ಜಿಲ್ಲೆಯಲ್ಲಿ ಉತ್ತಮ ರೀತಿಯಲ್ಲಿ ಕೆಲಸ ಮಾಡುತ್ತಿವೆ. ಜಿಲ್ಲಾ ಸಂಸ್ಥೆಗೆ ಜಿಲ್ಲಾ ಪಂಚಾಯತ್ ವತಿಯಿಂದ ಕಾರ್ಯಕ್ರಮಗಳಿಗೆ ಮತ್ತು ಸಮವಸ್ತ್ರಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಿಸುವ ವ್ಯವಸ್ಥೆ ಮಾಡಿಸುತ್ತೇವೆ ಎಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಎಂ.ಡಿ. ಬಳ್ಳಾರಿ ಉಪನಿರ್ದೇಶಕರು(ಅಭಿವೃದ್ಧಿ) ಹಾಗು ಪ್ರಾಚಾರ್ಯರು ಡಯಟ್ ಹಾವೇರಿ, ಶ್ರೀಮತಿ ಮಾಧುರಿ ದೇವಧರ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಆರ್.ಆರ್. ಕಾಶೆಪ್ಪನವರ, ಜಿಲ್ಲಾ ಕಾರ್ಯದರ್ಶಿ ಶ್ರೀ ರವಿ ಹಿಂಚಿಗೇರಿ, ಶ್ರೀ ಮಲ್ಲಿಕಾರ್ಜುನ ಕೋಟೂರ, ಶ್ರೀ ಎಂ.ಆರ್. ಪಾಟಿಲ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಶಿವಶಂಕರ ಎ.ಎಲ್.ಟಿ.(ಎಸ್.) ಶ್ರೀ ಗಂಗಾಧರ ಎ.ಎಲ್.ಟಿ., (ಎಸ್) ಶ್ರೀಮತಿ ಅಮೃತಮ್ಮ ಎ.ಎಲ್.ಟಿ.(ಸಿ.) ಸಿಸ್ಟರ್ ಸಿಂಥಿಯಾ ಎ.ಎಲ್.ಟಿ.(ಜಿ.) ಆಗಮಿಸಿದ್ದರು. 39 ಸ್ಕೌಟ್ ಮಾಸ್ಟರ್ ಮೂಲ ತರಬೇತಿ, 23 ಗೈಡ್ ಕ್ಯಾಪ್ಟನ್ ಮೂಲ ತರಬೇತಿ, 8 ಜನ ಕಬ್ ಮಾಸ್ಟರ್ ಮೂಲ ತರಬೇತಿ, 29 ಸ್ಕೌಟ್ ಮಾಸ್ಟರ್ ಮುಂದುವರೆದ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದರು.

* ದಿನಾಂಕ 19-12-2014 ರಂದು ಭಾರತ್ ಸ್ಕೌಟ್ ಮತ್ತು ಗೈಡ್ಸ್ ತಾಲೂಕಾ ಸಂಸ್ಥೆ ಹಾನಗಲ್‌ನ ಸರಕಾರಿ ಹೆಣ್ಣು ಮಕ್ಕಳ ಶಾಲೆ ಅಕ್ಕಿ ಆಲೂರಿನಲ್ಲಿ ಒಂದು ದಿನದ ಸ್ಕೌಟ್ ಮಾಸ್ಟರ್ - ಗೈಡ್ಸ್ ಕ್ಯಾಪ್ಟನ್ ಪುನರ್ ಚೇತನ ಶಿಬಿರ ಮತ್ತು ದ್ವಿತೀಯ ಸೋಪಾನ ಪರೀಕ್ಷಾ ಶಿಬಿರ ನಡೆಸಲಾಯಿತು. ಕಾರ್ಯಕ್ರಮದಲ್ಲಿ ಶ್ರೀ ಪ್ರಭು ಸುಣಗಾರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾನಗಲ್ ಸಂದರ್ಶನ ನೀಡಿದರು. ಪರೀಕ್ಷಾ ಶಿಬಿರದಲ್ಲಿ 80 ಸ್ಕೌಟ್ಸ್, 66 ಗೈಡ್ಸ್ ಭಾಗವಹಿಸಿದ್ದರು. ಪರೀಕ್ಷಾ ಶಿಬಿರದಲ್ಲಿ ಶ್ರೀ ಎ.ಎಲ್. ಶೇಖಸೂರಣಗಿ, ಡಿ.ಓ.ಸಿ. ಶ್ರೀ ಎಂ.ಆರ್. ಪಾಟೀಲ, ಶ್ರೀಮತಿ ಶೋಭಾ ಪಾಟೀಲ ಕಾರ್ಯನಿರ್ವಹಿಸಿದರು.

## ಕೋಲಾರ

* ದಿನಾಂಕ 07-01-2015 ಮತ್ತು 08-01-2015 ರಂದು ಕೋಲಾರ ತಾಲೂಕಿನ ಸ್ಥಳೀಯ ಸಂಸ್ಥೆ ವತಿಯಿಂದ ದ್ವಿತೀಯ ಸೋಪಾನ/ದ್ವಿತೀಯ ಚರಣ ಪರೀಕ್ಷಾ ಶಿಬಿರವನ್ನು ನಗರದ ತಪ್ಪಲಿನ ಅಂತರಗಂಗೆ ಬೆಟ್ಟದಲ್ಲಿ ಹಮ್ಮಿಕೊಳ್ಳಲಾಗಿತ್ತು. ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಶಿಕ್ಷಕರ ವರ್ಗದವರು ಹಾಗೂ 150 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಸಮಾರೋಪ ಸಮಾರಂಭದಲ್ಲಿ ಸಮಾಜ ಸೇವಕರಾದ ಶ್ರೀ ರಂಜಿತ್ ರವರು ಪ್ರಮಾಣ ಪತ್ರ ವಿತರಿಸಿ ವಿದ್ಯಾರ್ಥಿ ಜೀವನದಲ್ಲಿ ಉತ್ತಮ ಮಾರ್ಗದರ್ಶನ ದೊರಕಿದಾಗ ವಿದ್ಯಾರ್ಥಿಗಳು ಶೈಕ್ಷಣಿಕವಾಗಿ ಸಬಲರಾಗಲು ಸಾಧ್ಯ ಎಂದು ತಿಳಿಸಿ ಮುಂದಿನ ದಿನಗಳಲ್ಲಿ ನಿಮ್ಮೊಂದಿಗೆ ಸೇವೆಗಾಗಿ ನಾನು ಸದಾ ಸಿದ್ಧ ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಉಮಾದೇವಿ, ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ವೇಣುಗೋಪಾಲ್, ಖಜಾಂಚಿ ಶ್ರೀ ಮುನಿಸ್ವಾಮಿರೆಡ್ಡಿ, ಸ್ಥಳೀಯ ಸಂಸ್ಥೆ ಪದಾಧಿಕಾರಿಯಾದ ಶ್ರೀ ಮಂಜುನಾಥಾಚಾರಿ, ಶ್ರೀ ಪ್ರಭಾಕರ, ಶ್ರೀ ಸಂತೋಷಕುಮಾರ್, ಶ್ರೀ ಮಂಜುನಾಥ, ಶ್ರೀಮತಿ ಲಕ್ಷ್ಮೀ, ಶ್ರೀ ವೆಂಕಟೇಶಪ್ಪ, ಶ್ರೀ ಬಾಬು ವಿ. ರವರು ಉಪಸ್ಥಿತರಿದ್ದರು

* ದಿನಾಂಕ 30-01-2015 ರಂದು 'ಸಮುದಾಯ ಅಭಿವೃದ್ಧಿ ಶಿಬಿರ' ಕಾರ್ಯಕ್ರಮದಡಿಯಲ್ಲಿ ಕೋಲಾರ ನಗರದಲ್ಲಿನ ಮುನೇಶ್ವರ ನಗರದಲ್ಲಿ ಮಕ್ಕಳ ಉಧ್ಯಾನವನವನ್ನು ಸ್ವಚ್ಛಗೊಲಿಸುವ ಮೂಲಕ ಸ್ಕೌಟ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಸೇವೆ ಸಲ್ಲಿಸಿದರು. ನಗರಸಭೆಯ ಉಪಾದ್ಯಕ್ಷರಾದ ಶ್ರಿಮತಿ ಸಾಕಮ್ಮ ರಾಜಣ್ಣರವರು ಕಸವನ್ನು ಸಂಗ್ರಹಿಸುವ ಮೂಲಕ ಶಿಬಿರವನ್ನು ಉದ್ಘಾಟನೆ ಮಾಡಿದರು. ರೋಟರಿ ಸಂಸ್ಥೆಯ ನಿರ್ದೇಶಕರಾದ ಶ್ರೀ ಗೋಪಾಲಕೃಷ್ಣ ಗೌಡರವರು ಸಮಾಜ ಸೇವೆಗೆ ಯುವ ಪೀಳಿಗೆಯನ್ನು ತಯಾರು ಮಾಡುತ್ತಿರುವ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗೆ ನಮ್ಮ ಸಹಕಾರ ಸದಾ ಸಿಗಲಿದೆ ಎಂದರು. ಈ ಶಿಬಿರದ ನಾಯಕತ್ವವನ್ನು ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ವಹಿಸಿದ್ದರು. ಈ ಸಂದರ್ಭದಲ್ಲಿ ಮಹಿಳಾ ಕಾಲೇಜಿನ ರೇಂಜರ್ಸ್, ಬಾಲಕರ ಕಾಲೇಜಿನ ರೋವರ್ಸ್, ಮಹಿಳಾ ಸಮಾಜ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಸುಭಾಷ್ ಶಾಲೆಯ ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

## ಕೊಪ್ಪಳ

ದಿನಾಂಕ 26-12-2014 ರಂದು ಕೊಪ್ಪಳ ಜಿಲ್ಲಾ ಹೆಚ್.ಡಬ್ಲ್ಯೂ.ಬಿ. ಮೀಟ್ ಹಾಗು ಕೊಪ್ಪಳ ಜಿಲ್ಲೆಯ ಕಾರ್ಯದರ್ಶಿಗಳ ಸಮಾವೇಶವನ್ನು ಶಾರದಾ ಪ್ರೌಢಶಾಲೆಯಲ್ಲಿ ನಡೆಸಲಾಯಿತು. ಅಧ್ಯಕ್ಷತೆಯನ್ನು ಜಿಲ್ಲಾ ಆಯುಕ್ತರು ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ ವಹಿಸಿದ್ದರು. ಈ ಸಮಾವೇಶದಲ್ಲಿ ಜಾಂಬೂರೇಟ್ ಬಗ್ಗೆ ಚರ್ಚಿಸಲಾಯಿತು. ಸ್ವಾಗತವನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಮಲ್ಲಿಕಾರ್ಜುನ ಚೌಕಿಮಠ ಹಾಗು ವಂದನಾರ್ಪಣೆಯನ್ನು ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಒ.ಸಿ., ಮಾತನಾಡಿದರು.

* ದಿನಾಂಕ 27-12-2014 ರಿಂದ 03-01-2015 ರ ವರೆಗೆ ಸ್ಕೌಟ್ ಮಾಸ್ಟರ್, ಕಬ್ ಮಾಸ್ಟರ್ ಪರಿಚಯಾತ್ಮಕ ಹಾಗೂ ಮೂಲ ತರಬೇತಿ ಮತ್ತು ದಿನಾಂಕ 27-12-2014 ರಿಂದ 02-01-2015 ರ ವರೆಗೆ ಗೈಡ್ ಕ್ಯಾಪ್ಟನ್ ತರಬೇತಿಯನ್ನು ಭಾಗೀರತಿ ತರಬೇತಿ ಕೇಂದ್ರ ಹೂವಿನ ಹಾಳ ತಾಲ್ಲೂಕ ಕೊಪ್ಪಳದಲ್ಲಿ ನಡೆಸಲಾಯಿತು.

ಸ್ಕೌಟ್ ಮೂಲ ತರಬೇತಿಗೆ ಶ್ರೀ ಬಾಬುರಾವ ನಿಂಬೂರೆ, ಎ.ಎಲ್.ಟಿ.(ಎಸ್) ಕಬ್ ಮಾಸ್ಟರ್ ಮೂಲ ತರಬೇತಿಗೆ ಶ್ರೀ ಬೊಮ್ಮನಾಯಕ ಎ.ಎಲ್.ಟಿ.(ಕ), ಗೈಡ್ ತರಬೇತಿಗೆ ಶ್ರೀಮತಿ ಉಮಾರವರು ನಾಯಕರುಗಳಾಗಿ ಕಾರ್ಯನಿರ್ವಹಿಸಿದರು.

* ದಿನಾಂಕ 26-01-2015 ರಂದು ನಡೆದ ಗಣರಾಜ್ಯೋತ್ಸವದ ಕಾರ್ಯಕ್ರಮವನ್ನು ಬಿ.ಇ.ಓ., ಕಛೇರಿಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಆಚರಿಸಲಾಯಿತು.

## ರಾಯಚೂರು

ದಿನಾಂಕ 17-12-2014 ರಿಂದ 23-12-2014 ರ ವರೆಗೆ ರಾಯಚೂರು ಜಿಲ್ಲಾ ಸಂಸ್ಥೆಯು ಹಮ್ಮಿಕೊಂಡಿದ್ದ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕಿಯರಿಗಾಗಿ 7 ದಿನಗಳ ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದ ಡಾ॥ ಮಹಾಲಿಂಗ, ಮ್ಯಾನೇಜಿಂಗ್ ಟ್ರಸ್ಟಿ, ಡಾ॥ ನರಸಿಂಹಲು ನಂದಿನಿ ಸ್ಮಾರಕ ಶಿಕ್ಷಣ ಸಂಸ್ಥೆ, ರಾಂಪುರ ಇವರು ಬಾಲ್ಯದಿಂದಲೇ ಶಿಕ್ಷಣದ ಜೊತೆಯಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ವಿದ್ಯಾರ್ಥಿಗಳನ್ನು ಭಾಗವಹಿಸುವಂತೆ ಪ್ರೇರೇಪಿಸಿ ಅವರ ಉಜ್ವಲ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಶಿಕ್ಷಕರು ಪ್ರಾಮಾಣಿಕವಾಗಿ ಪ್ರಯತ್ನಿಸಲು ಸಲಹೆ ನೀಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರು ವಹಿಸಿ ಮಾತನಾಡಿ, ತರಬೇತಿ ಪಡೆದ ಎಲ್ಲ ಶಿಕ್ಷಕರು ಪ್ರಾಮಾಣಿಕತೆಯಿಂದ ಶಾಲೆಗಳಲ್ಲಿ ಘಟಕಗಳನ್ನು ಪ್ರಾರಂಭಿಸಿ ವಿದ್ಯಾರ್ಥಿಗಳ ಸರ್ವತೋಮುಖ ಏಳಿಗೆಗೆ ಶ್ರಮಿಸಲು ಕರೆ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಆಯುಕ್ತರು (ಸ್ಕೌ) ಇವರು ಎಲ್ಲರನ್ನು ಸ್ವಾಗತಿಸಿ ಪ್ರಾಸ್ತಾವಿಕವಾಗಿ ಮಾತನಾಡಿದರು. ತರಬೇತಿಯ ನಾಯಕರಾದ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು (ಗೈ) ಹಾಗೂ ಡಾ॥ ಹೆಚ್.ಬಿ. ಭರಶೆಟ್ಟಿ ಎ.ಎಲ್.ಟಿ.(ಎಸ್.) ಇವರು 7 ದಿನದ ತರಬೇತಿ ಶಿಬಿರದ ವರದಿ ನೀಡಿದರು. ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಗೋವಿಂದರಾಜು ಎಸ್, ಶ್ರೀ ಮಹಾದೇವಪ್ಪ ವೇದಿಕೆಯಲ್ಲಿದ್ದರು. ಶ್ರೀಮತಿ ಕೆ. ಆಲಿಯಾಖಾನಂ ಖಜಾಂಚಿ ಇವರು ವಂದಿಸಿದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯಕ್ರಮವನ್ನು ನಿರೂಪಿಸಿದರು. ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರಕ್ಕೆ 24 ಹಾಗೂ ಗೈಡ್ ಕ್ಯಾಪ್ಟನ್ನರ ಮೂಲ ತರಬೇತಿಗೆ 14 ಶಿಬಿರಾರ್ಥಿಗಳು ಭಾಗವಹಿಸಿದ್ದರು.

---

Discipline yourself daily by having a plan-not just vague wishful thinking, commit yourself daily to do something however small, for somebody else for by making other people happy you will find true happiness yourself



## ಶ್ರದ್ಧಾಂಜಲಿ



**ಡಾ. ಎಸ್.ಎಸ್. ಸಿದಾರಡ್ಡಿ**

ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಬೀದರ್

ಕರ್ನಾಟಕದ ಹೆಸರಾಂತ ಸರ್ಜನ್ ಹಾಗೂ ಸಮಾಜ ಸೇವಕ (ಎಫ್‌ಪಿ.ಎ.ಐ.) ಸಂಸ್ಥೆಯ ಸ್ಥಾಪಕ ಕಾರ್ಯದರ್ಶಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಡಾ. ಎಸ್.ಎಸ್. ಸಿದಾರಡ್ಡಿಯವರು ದಿ॥ 02-04-2015 ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. ಪತ್ನಿ ಶ್ರೀಮತಿ ಗುರಮ್ಮ ಸಿದಾರಡ್ಡಿ, ಮಗಳು ಡಾ. ರಾಜಶ್ರೀ, ಮಗ ಡಾ. ವಿಕ್ರಮ್ ಸಿದಾರಡ್ಡಿ ಹಾಗೂ ಅಪಾರ ಸಂಖ್ಯೆಯ ಬಂಧು-ಬಳಗವನ್ನು ಅಗಲಿದ್ದಾರೆ.

ಸ್ಕೌಟ್-ಗೈಡ್ ಚಳವಳಿಯಲ್ಲಿ ವಿದ್ಯಾರ್ಥಿ ದೆಸೆಯಲ್ಲಿ ಪಾಲುಗೊಂಡ ಶ್ರೀಯುತರು ಕಳೆದ ನಾಲ್ಕು ದಶಕಗಳ ಕಾಲ ಬೀದರ್ ಜಿಲ್ಲಾ ಸಂಸ್ಥೆ, ರಾಜ್ಯ ಸಂಸ್ಥೆ ಹಾಗೂ ರಾಷ್ಟ್ರೀಯ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ, ಬೀದರ್ ಜಿಲ್ಲೆಯಲ್ಲಿ ಸ್ಕೌಟ್-ಗೈಡ್ ಚಳವಳಿ ಬೆಳೆಸುವಲ್ಲಿ ಬಹಳಷ್ಟು ಶ್ರಮಿಸಿದ್ದಾರೆ. ಐ.ಎಂ.ಎ. ಹಾಗೂ ರೋಟರಿ ಕ್ಲಬ್‌ಗಳ ಸಂಸ್ಥಾಪಕ, ಅಧ್ಯಕ್ಷರಾಗಿ ಅಪಾರವಾದ ಸಾರ್ವಜನಿಕ ಸೇವೆ ಸಲ್ಲಿಸಿದ್ದಾರೆ.

ಇವರ ನೇತೃತ್ವದಲ್ಲಿ ಬೀದರ್‌ನಲ್ಲಿ 1994ರಲ್ಲಿ ಯಶಸ್ವಿಯಾಗಿ ಜರುಗಿದ 22ನೇ ಕರ್ನಾಟಕ ರಾಜ್ಯ ಸ್ಕೌಟ್-ಗೈಡ್ ಜಾಂಬೋರೇಟ್ ಇಂದಿಗೂ ಕರ್ನಾಟಕದ ಭಾರತ್ ಸ್ಕೌಟ್ಸ್-ಗೈಡ್ಸ್ ಚಳವಳಿಯ ಇತಿಹಾಸದಲ್ಲಿ ಅವಿಸ್ಮರಣೀಯವಾಗಿ ಉಳಿದಿದೆ. ಶ್ರೀಯುತರು ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿ ಅಮೂಲ್ಯವಾದ ಕೊಡುಗೆಯನ್ನು ನೀಡಿರುತ್ತಾರೆ.

ದಿವಂಗತರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಹಾಗು ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಕುಟುಂಬದವರಿಗೆ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

---

**ಶ್ರೀ ನಾರಾಯಣರಾವ್ ಮನ್ನಳ್ಳಿ,** ಮಾಜಿ ವಿಧಾನಸಭಾ ಸದಸ್ಯರು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೀದರ್ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾಗಿ 30 ವರ್ಷಗಳ ಕಾಲ ಸೇವೆ ಸಲ್ಲಿಸಿದ ಹಾಗೂ ಬೀದರ್‌ನ ಮಾಜಿ ಶಾಸಕರಾದ **ಶ್ರೀ ನಾರಾಯಣರಾವ್ ಮನ್ನಳ್ಳಿ** ಯವರು ದಿ. 29-01-2015 ರಂದು ನಿಧನ ಹೊಂದಿರುತ್ತಾರೆ. ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಹಾಗೂ ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಕುಟುಂಬದವರಿಗೆ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

---



**ಶ್ರೀ ಎನ್. ಬಸವರಾಜ್,** ಎ.ಎಲ್.ಟಿ. (ಎಸ್.) ಇವರು ದಿನಾಂಕ 30-01-2015 ರಂದು ನಿಧನರಾದರು. ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಕಾರ್ಯದರ್ಶಿಯಾಗಿ ಹಾಗೂ ಅನೇಕ ಸ್ಕೌಟ್ ಶಿಬಿರಗಳಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಿದ್ದರು.

ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಹಾಗೂ ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಕುಟುಂಬದವರಿಗೆ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**ರಾಜ್ಯ ಕಾರ್ಯದರ್ಶಿ**






ಜಾಂಬೋರೇಟ್ ಸಮಾವೇಶದಲ್ಲಿ
ವಿವಿಧ ಜಿಲ್ಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಪಥಚಲನದಲ್ಲಿ ಭಾಗವಹಿಸಿರುವುದು.





ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ತಮ್ಮ ಜಿಲ್ಲೆಗಳನ್ನು ಪ್ರತಿನಿಧಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಜನಪದ ಉಡುಗೆ ತೊಡುಗೆಯೊಂದಿಗೆ ಪ್ರದರ್ಶಿಸುತ್ತಿರುವುದು.



ಜಾಂಬೋರೇಟ್ ಸಮಾವೇಶದಲ್ಲಿ ವಾಸ್ತವ್ಯ ಹೂಡಿದ್ದವರಿಗಾಗಿ ದಿನದ ಇಪ್ಪತ್ತಾಲ್ಕು ಗಂಟೆಯೂ ಕಾರ್ಯನಿರ್ವಹಿಸುವ ತುರ್ತು ಆರೋಗ್ಯ ಚಿಕಿತ್ಸಾ ಘಟಕದಲ್ಲಿ ಚಿಕಿತ್ಸೆ ಪಡೆಯುತ್ತಿರುವ ದೃಶ್ಯಾವಳಿ.



ಜಾಂಬೋರೇಟ್ ಸಮಾವೇಶದಲ್ಲಿ ಗುಡಾರಗಳ ಎದುರು ಚಟುವಟಿಕೆಯಲ್ಲಿ ಪಾಲ್ಗೊಂಡಿರುವ ಸ್ಕೌಟ್ಸ್ ವಿದ್ಯಾರ್ಥಿಗಳು.





ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು
ದೈಹಿಕ ಶ್ರಮದ ಚಟುವಟಿಕೆಗಳನ್ನು ಪ್ರದರ್ಶಿಸುತ್ತಿರುವ ದೃಶ್ಯಾವಳಿ.



ಜಾಂಬೋರೇಟ್ ಸಮಾವೇಶದಲ್ಲಿ ಸ್ಕೌಟ್ಸ್ ವಿದ್ಯಾರ್ಥಿಗಳು ದೈಹಿಕ ಶ್ರಮದ ಪಿರಮಿಡ್ ರಚನೆಯ ಚಟುವಟಿಕೆಯಲ್ಲಿ ಪಾಲ್ಗೊಂಡಿರುವುದು.



ಜಾಂಬೋರೇಟ್ ಸಮಾವೇಶದಲ್ಲಿ ಗೈಡ್ಸ್ ವಿದ್ಯಾರ್ಥಿನಿಯರು ಯೋಗ ಪ್ರದರ್ಶನ ನೀಡುತ್ತಿರುವುದು.



ಜಾಂಬೋರೇಟ್ ಸಮಾವೇಶದಲ್ಲಿ ಭಾಗವಹಿಸಿದ್ದ ಸ್ಕೌಟ್ಸ್ ಹಾಗೂ ಗೈಡ್ಸ್ ವಿದ್ಯಾರ್ಥಿಗಳಿಗೆ ಪ್ರಥಮ ಚಿಕಿತ್ಸೆ ಕುರಿತಂತೆ ಮಾಹಿತಿ ನೀಡುತ್ತಿರುವುದು. ಚಿತ್ರದಲ್ಲಿ ಆಂಬುಲೆನ್ಸನ್ನು ಗಮನಿಸಬಹುದು.



ಜಾಂಬೋರೇಟ್‌ನಲ್ಲಿ ಭಾಗವಹಿಸಿ ವಾಸ್ತವ್ಯ ಹೂಡಿದ್ದ ವಿದ್ಯಾರ್ಥಿಗಳಿಗೆ ಶುದ್ಧ ಕುಡಿಯುವ ನೀರಿನ ಪೂರೈಕೆ ಜೊತೆಗೆ ಸ್ನಾನದ ಗೃಹ ಹಾಗು ಶೌಚಾಲಯಗಳನ್ನು ನಿರ್ಮಿಸಲಾಗಿತ್ತು.



ಜಾಂಬೋರೇಟ್ ಸಮಾವೇಶಕ್ಕೆ ಭೇಟಿ ನೀಡಿದ್ದ ಕೇಂದ್ರ ಸರ್ಕಾರದ ಮಂತ್ರಿಗಳು ಹಾಗೂ ದಾವಣಗೆರೆ ಸಂಸತ್ ಸದಸ್ಯರಾದ ಶ್ರೀ ಜಿ.ಎಂ. ಸಿದ್ದೇಶ್ವರ್‌ರವರ ಜೊತೆಯಲ್ಲಿ ರಾಜ್ಯ ಮುಖ್ಯ ಆಯುಕ್ತರು, ರಾಷ್ಟ್ರೀಯ ಉಪಾಧ್ಯಕ್ಷ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಹಾಗೂ ರಾಜ್ಯ ಉಪಾಧ್ಯಕ್ಷರಾದ ಶ್ರೀಮತಿ ಶಾಂತಾ ವಿ. ಆಚಾರ್ಯ ಹಾಗೂ ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿ ಅವರನ್ನು ಕಾಣಬಹುದು.



ಜಾಂಬೋರೇಟ್ ಸಮಾವೇಶದ ವಿಶ್ವಪರ್ಯಟನೆ ಕಾರ್ಯಕ್ರಮದ ಉದ್ಘಾಟನೆಯನ್ನು ಸಾಹಿತಿ ಶ್ರೀ ಗೊ.ರು. ಚನ್ನಬಸಪ್ಪ ನೆರವೇರಿಸಿದರು. ಅವರೊಂದಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಆಯುಕ್ತರುಗಳಾದ ಶ್ರೀಮತಿ ಗೀತಾ ನಟರಾಜ್ ಹಾಗೂ ಶ್ರೀ ಎಂ.ಎ. ಖಾಲಿದ್ ಮತ್ತು ರಾಜ್ಯ ಉಪಾಧ್ಯಕ್ಷ ಶ್ರೀ ಟಿ.ಎಸ್. ಲೂಕಾಸ್‌ಅವರನ್ನು ಕಾಣಬಹುದು.



ಜಾಂಬೋರೇಟ್ ಸಮಾವೇಶದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ನಟ ಶ್ರೀ ಸುಧೀಪ್ ಭೇಟಿ ನೀಡಿದ್ದರು. ಅವರೊಂದಿಗೆ ರಾಜ್ಯ ಕಾರ್ಯದರ್ಶಿ ಶ್ರೀ ಸಿದ್ದಯ್ಯ ಹಾಗೂ ಮಾನ್ಯ ಶಾಸಕರನ್ನು ಕಾಣಬಹುದು.



ಜಾಂಬೋರೇಟ್ ಸಮಾವೇಶದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ವಿಧಾನ ಪರಿಷತ್ ಸದಸ್ಯ ಶ್ರೀ ಬಸವರಾಜ ಹೊರಟ್ಟಿ ಮತ್ತು ಶ್ರೀಮತಿ ರಾಣಿ ಸತೀಶ್, ಅಧ್ಯಕ್ಷರು, ಹಟ್ಟಿಗೋಲ್ಡ್ ಮೈನ್ಸ್ ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ಶಾಂತಾ ವಿ. ಆಚಾರ್ಯ, ಆರ್. ಚೌಡರೆಡ್ಡಿ, ಎಂ.ಎಲ್.ಸಿ. ಇವರುಗಳನ್ನು ಕಾಣಬಹುದು.





ಶ್ರೀಮತಿ ಆರ್. ವಿಮಲಾಗೌಡ, ವಿಧಾನ ಪರಿಷತ್ ಸದಸ್ಯರು ಮತ್ತು ಡಾ. ವಾಮನಾಚಾರ್ಯ, ಅಧ್ಯಕ್ಷರು, ಕರ್ನಾಟಕ ಪರಿಸರ ಮಾಲಿನ್ಯ ಮಂಡಳಿ ಇವರುಗಳು ದಿನಾಂಕ 18 ರಿಂದ 23 ಜನವರಿ 2015 ದೊಡ್ಡಬಳ್ಳಾಪುರದಲ್ಲಿ ನಡೆದ ಜಾಂಬೋರೇಟ್‌ನಲ್ಲಿ ಅತಿಥಿಗಳಾಗಿ ಭಾಗವಹಿಸಿದ್ದರು.



ಜಾಂಬೋರೇಟ್ ಸಮಾವೇಶದ ಜಿಲ್ಲಾದರ್ಶನ ಕಾರ್ಯಕ್ರಮ ಉದ್ಘಾಟಿಸಿದ ಶ್ರೀಮತಿ ಫಿಲೋಮಿನಾ ಲೋಬೋ, ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಅವರನ್ನು ಕಾಣಬಹುದು.

Regd. as News Paper (Magazine) RNI No : 13348/1959.
Posted at Registered News Paper Mailing Center Bangalore P.S.O. Mysore Road-560 026.
On 22-05-2015 (No. of Pages : 4+4+28=36)

**View of Scouts & Guides participating in different Adventure Activities & Programmes at the 27th Karnataka State Scouts & Guides Jamborette held from 17 to 23rd January 2015 at Dr Annie Besant Scouts and Guides State Training and Camping Centre Doddaballapur, Bengaluru Rural District.**















SCOUTS
Creating a Better World

**If not delivered, please return to :**
THE EDITOR, Karnataka Scout & Guide
State Headquarters, Shanthi Gruha
#39, Palace Road, Bangalore - 560 001.
Ph.: 080-22260017 e-mail.: shq@scout.org.in

**Published by : The Bharat Scouts & Guides, Karnataka, State Headquarters Shanthi Gruha, #39, Palace Road, Bengaluru - 560 001. Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bangalore 26